ಸಂಪುಟ : 5 ಸಂಚಿಕೆ : 12 ಬೆಲೆ : 50 ಪೈಸೆ ಆಗಸ್ಟ್ 1981

# ಪಂಚಮ



ಆಸಿಡ್‌ನಿಂದ ಮುಖ ಕಳೆದು ಕೊಂಡ ಶಿವಣ್ಣ

## ಕರಾಳ ಹಿಂದೂ ಮನಸ್ಸೆ ಹೇಳು ನಿನ್ನ ಕ್ರೌರ್ಯಕ್ಕೆ ಕೊನೆ ಎಂದು?

ಬೆಸ್ತರಪಾಳ್ಯದ ದಲಿತರ ಮೇಲೆ ಆಸಿಡ್ ಎರಚಿ ಹಲ್ಲೆ ನಡೆಸಿದ್ದಾರೆಂಬ ಸುದ್ದಿ ಹೇಗೋ ತಿಳಿದು ಹಲ್ಲೆಗೊಳಗಾದವರನ್ನು ನೋಡಲು ತುಮಕೂರು ಆಸ್ಪತ್ರೆಗೆ ಹೋದೆವು. ಜುಲೈ ೬ರಂದು ರಾತ್ರಿ ೧೧ ಗಂಟೆಯಲ್ಲಿ ಈ ಹಲ್ಲೆ ನಡೆದಿತ್ತು. ಕ್ಯಾಸುಯಾಲಿಟಿ ವಾರ್ಡ್‌ನ ಹೊರಭಾಗದಲ್ಲಿ ಒಂದೇ ಮಂಚ. ಅಲ್ಲಿ ಶಿವಣ್ಣ (ಸು, ೨೦ವರ್ಷ) ಮಲಗಿದ್ದ. ಮುಖದ ಎಡಭಾಗ ಪೂರ್ತಿ ಸುಟ್ಟಿತ್ತು, ಕಣ್ಣು ಕುರುಡಾಗಿದೆ. ಬಾಯಿ ಬಿಚಲಾಗದ ಶಿವಣ್ಣ ಏನೂ ಹೇಳಲಾರ. ಆತನ ಹಿಂಸೆ ನೋಡಿದವರ ಕರುಳು ಕಿವುಚು ವಂತಿದೆ. ಇನ್ನೊಬ್ಬ ದೊಡ್ಡರಂಗಯ್ಯ (೨೫) ಮುಖ, ಮೈ ಕೈ ಮೇಲೆಲ್ಲ ಆಸಿಡ್‌ನಿಂದ ಸುಟ್ಟಗಾಯಗಳು. ಮಚ್ಚಿನ ಏಟನಿಂದ ತಪ್ಪಿಸಿಕೊಂಡು ಅರ್ದಕತ್ತರಿಸಿದ ಬೆರಳೊಂದಕ್ಕೆ ಬಟ್ಟೆಸುತ್ತಲಾಗಿತ್ತು. "ಏನಪ್ಪ ಇವೆಲ್ಲ ಯಾಕಾಯ್ತು?" ಅಂದಿದ್ದಕ್ಕೆ ಹೇಳಿದ :

ಅವತ್ತು ರಾತ್ರಿ ನಮ್ಮ ಮಾವ ನರಸಿಂಹಯ್ಯನ ಮನೇಲಿ ಮಲಗಿದ್ವಿ. ಯಾರೋ ಬಂದು ಬಾಗಿಲು ತಟ್ಟಿ "ನರಸಿಂಹಯ್ಯನ್ನ ಪಕ್ಕದ ಊರಿನ ಗೌಡ್ರು ಕರೀತಾರೆ ಬಾಗಿಲು ತೆಗಿ" ಅಂದ್ರು. ಅವರಿಲ್ಲ ಅಂದ್ರೂ ಕೇಳದೆ, ಒತ್ತಾಯಿಸಿ ಬಾಗಿಲು ತೆಗೆಯಿಸಿದ್ರು ಬ್ಯಾಟರಿ ಹಾಕಿ ನೋಡಿದ್ವ ನಮ್ಮೂರಿನವರೇ, ವಕ್ಕಲಿಗರ ಗಂಗಣ್ಣ, ಮಗ ಶಾನಪ್ಪ, ರಾಮಣ್ಣ ಪಕ್ಕದ ಊರಿನ ದೊಡ್ಡ ಹೊನ್ನಯ್ಯ, ಇನ್ನಿಬ್ಬರು ಹೊಸಬರು ಗುರುತು ಸಿಗಲಿಲ್ಲ. 'ಸುಳ್ಳು ಹೇಳ್ತೀರೇನೋ, ನರಸಿಂಹನತಲೆ ತಗೆತೀವಿ' ಅಂತ ನಮ್ಮೇಲೆ ಬಿದ್ದು ಹೊಡೆದೇ ಬಿಟ್ರು, ಅವ್ರ ಹತ್ರ ದೊಣ್ಣೆ, ಮಚ್ಚು ಇದ್ವು, ಮುಖಕ್ಕೆ ಎಂತದೋ ಎಣ್ಣೆ ಎರಚಿ ಅಕ್ಕ ಪಕ್ಕದವರೆಲ್ಲ ಓಡಿ ಬಂದ್ರು, ಇವರೆಲ್ಲ ಓಡಿ ಹೋದ್ರು."

ತುಮಕೂರು ಜಿಲ್ಲಾ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ೪ ಜನ ಹೆಬ್ಬೂರು ಹೋಬಳಿ ಬೆಸ್ತರ ಪಾಳ್ಯಕ್ಕೆ ಹೋದೆವು; ಎಲ್ಲ ಹೆಂಚಿನ ಮನೆಗಳು, ನೋಡಿದ ತಕ್ಷಣ ಜನತಾ ಮನೆಗಳೆಂದು ತಿಳಿಯಿತು. ಆದರೆ ಜನಗಳ ಸುಳಿವೇ ಕಾಣಲಿಲ್ಲ, ೨೦ ಮನೆಗಳ ದಲಿತರಕೇರಿ, ವಕ್ಕಲಿಗರವ್ರು, ಇನ್ನು ಇತರೆಯವು. ಪಕ್ಕದ ಊರುಗಳಲ್ಲಿ

ನಾಲ್ಕನೆ ಪುಟಕ್ಕೆ

## ಮತಾಂತರ ಮದ್ದೆ?

ನೊಂದು ಬೆಂದ ಮೀನಾಕ್ಷಿಪುರಂ ದಲಿತರು ಸಾಮೂಹಿಕವಾಗಿ ಮುಸ್ಲೀಮರಾಗಿ, ಜಾತಿಯತೆಯಿಂದ ಕೊಳೆತು ನಾರುತ್ತಿರುವ ಹಿಂದೂ ಧರ್ಮಕ್ಕೆ ಬಾಂಬು ಇಟ್ಟಿದ್ದಾರೆ. ಬೆಲ್ಚಿ ವಿಲ್ಲುಪುರಂ ಪರಾಸ್ ಬಿಗಾ ಪಿಪ್ರಾ ಬೆಸ್ತರಪಾಳ್ಯ ಕಾಮಗೆರೆಯಂಥ ಸಹಸ್ರ ಸಹಸ್ರ ಕೊಲೆ ಸುಲಿಗೆ ಸರಮಾಲೆಗಳಿಗೆ ಕಣ್ಣು ಮುಚ್ಚಿ ಕೊಂಡ ಹಿಂದೂ ನಾಯಕರು, ಮತಾಂತರಕ್ಕೆ ವಿದೇಶಿ ಹಣ, ಕೋಟನೋಟು, ಆಮಿಷ ಇತ್ಯಾದಿ ಕಾರಣಗಳ ಕೊಟ್ಟು ಬೆಂಕಿಗೆ ತುಪ್ಪ ಹಾಕುತ್ತಿದ್ದಾರೆ. ಇಂಡಿಯಾ ಮೀನಾಕ್ಷಿಪುರವಾಗ ತೊಡಗಿದೆ.

ಸೆಪ್ಟಂಬರ್ ತಿಂಗಳ ಪಂಚಮವು ಮತಾಂತರದ ಹತ್ತು ಹಲವಾರು ಮುಖಗಳನ್ನು ತುಂಬಿಕೊಂಡು ವಿಶೇಷ ಸಂಚಿಕೆಯಾಗಿ ಬರಲಿದೆ. ಈ ಕುರಿತು ಚಿಂತನೆ, ಸಮೀಕ್ಷೆ, ಸಂದರ್ಶನ, ಅಭಿಪ್ರಾಯ, ಅನುಭವ ಯಾವುದಿದ್ದರೂ ಬರೆದು ನಮಗೆ ಆಗಸ್ಟ್ ೨೦ ರ ಒಳಗೆ ತಲುಪುವಂತೆ ಕಳಿಸಿರಿ. ಸಂಪಾದಕ.

## ಪ್ರೀತಿಯನ್ನು ಕೊಲೆಮಾಡಿದ ಕೈಗಳು

ಜಾತಿ ಗೋಡೆಗಳನ್ನು ಮುರಿದು ಪ್ರೀತಿಸ ತೊಡಗಿದ್ದ ತರುಣ ಪ್ರೇಮಿಗಳಿಬ್ಬರನ್ನು ಮಿದುಳಲ್ಲಿ ಜಾತಿಯ ಕಕ್ಕಸ್ಸು ತುಂಬಿಕೊಂಡ ಕರಾಳ ಕೈಗಳು ಕೊಂದು ಹಾಕಿರುವ ಘಟನೆಯೊಂದು ವರದಿಯಾಗಿದೆ. ಇದು ನಡೆದಿರುವುದು ಕೊಳ್ಳೆಗಾಲಕ್ಕೆ ಸಮೀಪದ ಕಾಮಗೆರೆಯಲ್ಲಿ.

ಜುಲೈ ೧೧ರಂದು ಸಂಜೆ ೬ಗಂಟೆಯ ಸಮಯ. ರೋಡ್ ಪಕ್ಕದಲ್ಲಿ ಒಂದಾ ಮಾಡಲು ಕುಂತಿದ್ದ ಮರಿಯಣ್ಣ ಮತ್ತು ಆತನ ಸ್ನೇಹಿತನಿಗೆ ರೋಡಿಗೆ ಒತ್ತಿಕೊಂಡಂತೆ ಇರುವ ಚಿಕ್ಕಣ್ಣೇಗೌಡರ ರೇಷ್ಮೆ ಬೇಸಿನ್ ಮನೆ ಒಳಗಿಂದ "ಅಯ್ಯಯ್ಯಪ್ಪೊ, ನನ್ನ ಸಾಯಿಸ್ಬೇಡಿ ಬುಟ್ಬುಡಿ" ಅಂದದ್ದೂ ನಂತರ ನರಳಾಟವೂ ಕೇಳಿಸಿತು. ಏನೆಂದು ನೋಡಲು ಮರಿಯಣ್ಣ ಮನೆಯ ಹಿಂದುಗಡೆಯಿಂದ ಬಾಗಿಲು ದೂಡಿ ಒಳಗೆ ಹೆಜ್ಜೆ ಇಟ್ಟ. ಒಳಗಿದ್ದ ಚಿಕ್ಕಣ್ಣೇಗೌಡ, ಮರಿಸ್ವಾಮಿ, ಪುಟ್ಟಯ್ಯ ಗಕ್ಕನೆ ತಿರುಗಿ ಗದರಿಸುತ್ತಾ ಕತ್ತಿಡಿದು ಆಚೆ ನೂಕಿದರು. ಆಚೆ ಬಂದ ಮರಿಯಣ್ಣ ರೋಡೊತ್ತಿನ ಗೋಡೆಯಲ್ಲಿರುವ ಅಂಗೈಯಗಲದ

ನಾಲ್ಕನೆ ಪುಟಕ್ಕೆ

# ಖೈದಿಗಳ ಸೆರೆಮನೆಯೇ ವಾಸಿ..........

ಹುಣಸೂರು ಜೂನಿಯರ್ ಕಾಲೇಜು ಪಕ್ಕದಲ್ಲಿ ನಮ್ಮ ಸರಕಾರ ನಡೆಸುತ್ತಿರುವ ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯವಿದೆ. ಈಗ ಒಂದು ವರ್ಷದ ಹಿಂದೆ ನಾನು ಭಾರತ ಸೇವಾದಳದ ಒಂದು ಶಿಭಿರಕ್ಕಾಗಿ ಅಲ್ಲಿಗೆ ಹೋಗಿ ಎರಡು ಮೂರು ದಿನ ಇದ್ದೆ.

ಬಿಹಾರ್‌ನ ಹಿಂದುಳಿದ ಊರುಗಳಲ್ಲಿಯ ಸೆರೆ ಮನೆಗಳ ಸವಿಯನ್ನು ಬಲ್ಲ ನನಗೆ ಈ ಹುಣಸೂರು ಸಮಾಜಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯ ಹಿಂದುಳಿದ ಬಿಹಾರಿನ ಖೈದಿಗಳ ಸೆರೆಮನೆಯೇ ಸಾವಿರಪಾಲು ವಾಸಿಎಂದು ಮನವರಿಕೆ ಆಯಿತು. ಒಂದು ರೂಮಿನಲ್ಲೂ ಕಿಟಕಿಗಳು ಸರಿಯಾಗಿಲ್ಲ. ಎಲ್ಲಾ ಮುರಿದ ಬಾಗಿಲುಗಳೇ. ವಾರ್ಡನ್ ಮ್ಯಾನೇಜರ್ ರೂಮು ಬಿಟ್ಟರೆ ವಿದ್ಯಾರ್ಥಿಗಳು ವಾಸಿಸುವ ಯಾವ ಕೋಣೆಯಲ್ಲೂ ಸರಿಯಾಗಿ ಬೆಳಕಿಲ್ಲ. ಅವ್ಯವಸ್ಥೆ ಪರಮಾವಧಿಮುಟ್ಟಿದೆ. ಊಟ ಮಾಡುವ ಜಾಗ ಕೈ ತೊಳೆಯುವ ಜಾಗವಂತೂ ಹತ್ತಾರು ವರ್ಷದಿಂದ ಹಾವಸೆ ಗಟ್ಟಿ ಕೊಳೆತು ನಾರುವ ದುರ್ನಾತದ ಮಡಿಲು. ಇರುವ ಒಂದೆರಡು ನಲ್ಲಿಗಳಲ್ಲಿಯೇ ವಿದ್ಯಾರ್ಥಿಗಳು ಎಲ್ಲಾ ಮಾಡಿಕೊಳ್ಳಬೇಕು. ಕಾಲು ಜಾರಿದರೆ ಸಾಕು, ಸಾಕ್ಷಿ ಸಹ ಇಲ್ಲದೆ ಅಪಘಾತಕ್ಕೀಡಾಗುವಂತಿದೆ. ಹಾಸ್ಟಲ್‌ಗೆ ಕಾಂಪೌಂಡು ಗೋಡೆ ಇಲ್ಲ ಮುಳ್ಳಿನ ಗಿಡ ಪೊದರು ಬೆಳದು ನಿಂತಿವೆ. ಹಗಲು ಹೊತ್ತೇ ಹುತ್ತದಿಂದ ಹಾವುಗಳ ಕಾಟ.

ಅಕ್ಕಪಕ್ಕದವರೆಲ್ಲಾ ಬೆಳಗಿನಿಂದ ರಾತ್ರಿವರೆಗೆ ಈ ಹಾಸ್ಟಲ್‌ನ ನಲ್ಲಿಗಳಲ್ಲೇ ಕೊಡಗಳನ್ನು ತಂದು ನೀರು ತೆಗೆದುಕೊಂಡು ಹೋಗುತ್ತಾರೆ. ಅವರ ಸರದಿ ಪೈಪೋಟಿ ಜಗಳಗಳೂ ನಡೆಯುತ್ತಿರುತ್ತೆ. ಈ ವಾತಾವರಣದಲ್ಲಿ ದಲಿತ ವಿದ್ಯಾರ್ಥಿಗಳು ಏಕಾಗ್ರತೆಯಿಂದ ಓದಬೇಕು. ಬರೆಯಬೇಕು. ಪರೀಕ್ಷೆಗೆ ಸಿದ್ಧರಾಗಿ ಪಾಸುಮಾಡಬೇಕು !

ಈ ಹಾಸ್ಟಲ್‌ಗಳಿಗೆ ವಾರ್ಷಿಕ ತನಿಖೆಯ ಮೇಲಾಧಿಕಾರಿಗಳೂ ಇರಬೇಕೆಂದು ತೋರುತ್ತೆ. ಇಷ್ಟೆಲ್ಲಾ ಅವ್ಯವಸ್ಥೆ ಇರುವುದು ಅವರ ಗಮನಕ್ಕೆ ಬರದೇ ಇರುವುದು ಬಹಳ ಆಶ್ಚರ್ಯ.

—ಟಿ. ಎಸ್. ಅನಂತರಂಗಾಚಾರ್

# ಕೊಲೆಯಾಗುತ್ತಿರುವ ಬಸವಣ್ಣ !

ದಿನಾಂಕ ೨೦-೬ ಉಗರಂದು ನಾನು ಹರಿಜನ ಯುವಕ ಮಲ್ಲಿಕಾರ್ಜುನ್, ಅವರ ಪತ್ನಿ ಪಾರ್ವತಿಯವರ ಜೊತೆ ನಂಜನಗೂಡು ತಾಲ್ಲೂಕಿನ ದೇವನೂರು ಮಠಕ್ಕೆ ಭೇಟಿ ಕೊಟ್ಟಿದ್ದೆವು. ಮಠದ ಹೊರಾಂಗಣಕ್ಕೆ ಪ್ರವೇಶಿಸಿದಾಗ ಅಲ್ಲಿ ಡಿ.ಎಂ. ಸಿದ್ಧಯ್ಯ ಎಂಬ ಶಿವಭಕ್ತ! ರಾಜಕಾರಣಿಯ ಮೇಲ್ವಿಚಾರಣೆಯಲ್ಲಿ ಅಡಿಗೆ ಕಾರ್ಯ ನಡೆಯುತ್ತಿತ್ತು. ಮಠದ ಒಳಾಂಗಣದಲ್ಲಿ ಸಂಪ್ರಾದಾಯ ಬದ್ಧವಾಗಿ ಕೆಲವು ಮರಿಸ್ವಾಮಿಗಳಿಗೆ ದೀಕ್ಷೆ ಕೊಡುವ ಕಾರ್ಯ ಮತ್ತೆ ಕೆಲವರಿಗೆ ಲಿಂಗಧಾರಣೆ ನಡೆಯುತ್ತಿತ್ತು. ಅಲ್ಲೆ ಮತ್ತೊಂದೆಡೆ ಒಂದು ಮದುವೆ ನಡೆಯುತ್ತಿತ್ತು. ನಾನು ಈ ಬಗ್ಗೆ ಪ್ರಶ್ನಿಸುತ್ತ ನಿಂತಿದ್ದಾಗ ಒರ್ವ ಮೇಲ್ಜಾತಿಯ ಕೊಬ್ಬಿದ ವ್ಯಕ್ತಿ ಮಲ್ಲಿಕಾರ್ಜುನ್‌ರನ್ನು ಗುರುತಿಸಿ, ಏಯ್ ಯಾವ ಜಾತಿನ ನೀನು? ಎಂದು ಪ್ರಶ್ನಿಸಿದ, ಆತನ ಕಣ್ಣು ಕೆಂಡ ದುಂಡೆಯಾಗಿತ್ತು, ಮಠಕ್ಕೆ ಏನೋ ಆತಂಕವಾಗಬಹುದೆಂಬ ಹೆದರಿಕೆಯ ಭಾವವೂ ಆತನಲ್ಲಿತ್ತು. ಆತನ ಭಯಂಕರ ಮುಖವನ್ನು ನೋಡಿ ನನ್ನ ನಾಲಿಗೆಯ ದ್ರವ ಆರಿ ಹೋಗಿತ್ತು. ನಾನು ಅಲ್ಲೆ ಕುಸಿಯುವಂತಾಗಿದ್ದೆ. ಆದರೆ ಮಲ್ಲಿಕಾರ್ಜುನ್ ಯಾವ ಭಾವನೆಯು ಇಲ್ಲದೆ ನಿರ್ವಿಕಾರವಾಗಿ 'ನಾವು ಹೊಲೆಯರು' ಎಂದೂ ನನ್ನನ್ನು ತೋರಿಸಿ 'ಲಿಂಗಾಯಿತರು' ಎಂದರು. ಆ ವ್ಯಕ್ತಿ ನನಗೆ "ನೀವು ತಿಳಿದಂತವರು ಇವರನ್ನೆಲ್ಲ ಯಾಕೆ ಕರಕಂಡು ಬರುವುದು? ಆದಷ್ಟು ಬೇಗ ಇಲ್ಲಿಂದ ಹೊರಡಿ, ಎಲ್ಲರಿಗೂ ತಿಳಿದರೆ ದೊಣ್ಣೆ ತಂದಾರು" ಎಂದ.

ಮಠದ ಹಿನ್ನಲೆ, ಕಾರ್ಯಗಳ ಬಗ್ಗೆ ಒಂದು ಸಂದರ್ಶನ ಲೇಖನವನ್ನು ಸ್ಥಳೀಯ ಆಂದೋಲನ ಪತ್ರಿಕೆಗೆ ಕೊಡಬೇಕೆಂಬ ಉದ್ದೇಶದಿಂದ ನಾವು ಮಠಕ್ಕೆ ಭೇಟಿ ನೀಡಿದ್ದೆವು. ಆದರೆ ಆ ಉದ್ದೇಶ ಕುಸಿಯಿತು. ಮಠದ ಬಗ್ಗೆ ಜಿಗುಪ್ಸೆ, ಅಸಹ್ಯ ಭಾವನೆ ಉಂಟಾಯಿತು. ಬಸವಣ್ಣ ಅಂದು ಕೊಲೆಯೋ ಆತ್ಮಹತ್ಯೆಯೊ ಆದದ್ದು ನಮಗೆ ಗೊತ್ತಿಲ್ಲ. ಆದರೆ ಇಂದಂತೂ ಆತನ ತತ್ವಗಳು ದಿನದಿನವೂ ಕೊಲೆ, ಆತ್ಮಹತ್ಯೆ ಆಗುತ್ತಲೇ ಇದೆ.

—ನಾಗರತ್ನ, ಹುಲ್ಲಹಳ್ಳಿ

## ಹೋರಾಟದ ಅರಿವಿನ ಪುಸ್ತಕ

# ಮೊಸಲಾತಿ

ಮೊಸಲಾತಿಯ ವಿರುದ್ಧ ದೇಶದ ಮೇಲ್ಜಾತಿಗಳು ಒಂದುಗೂಡಿ ಮುಸಲತ್ತು ನಡೆಸುತ್ತಿರುವ ಹಿನ್ನಲೆಯಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಂಗಳೂರಿನಲ್ಲಿ ಏಪ್ರಿಲ್ 18, 19 ರಂದು ಮೊಸಲಾತಿಯನ್ನು ಕುರಿತಾದ ವಿಚಾರ ಸಂಕಿರಣವನ್ನು ಏರ್ಪಡಿಸಿ ಅನೇಕ ಚಿಂತನಾಪರ ಮಗ್ಗುಲುಗಳನ್ನು ಸೃಷ್ಟಿಸಿತು. ವಿಚಾರ ಸಂಕಿರಣದಲ್ಲಿ ಮಾತನಾಡಿರುವ ಹಲವಾರು ವ್ಯಕ್ತಿಗಳು ಮೊಸಲಾತಿಯ ಐತಿಹಾಸಿಕ ಅವಶ್ಯಕತೆಯನ್ನು ಸಮರ್ಥವಾಗಿ ಗುರುತಿಸಿದ್ದಾರೆ.

ದೇಶದ ನಿಜವಾದ ಒಡೆಯರು-ಅಂದರೆ ಈ ನೆಲದ ಆರ್ಥಿಕತೆಗೆ ಅಂದಿನಿಂದಲೂ ದುಡಿದಿರುವ ದಲಿತರು —ಮೊಸಲಾತಿಯ ನೆಪದಲ್ಲಿ ಭಿಕ್ಷೆ ಬೇಡುತ್ತಿಲ್ಲ, ತಮ್ಮ ಹಕ್ಕನ್ನು ಪಡೆಯಲು ಹೋಗುತಿದ್ದಾರೆಂದು ಸಿದ್ಧಲಿಂಗಯ್ಯ ಗುರ್ತಿಸಿದರೆ, ಲಂಕೇಶ್- ಬ್ರಾಹ್ಮಣ-ಲಿಂಗಾಯಿತ-ವಕ್ಕಲಿಗರೇ ಮೊದಲಾದವರನ್ನು ನಂಬಬೇಡಿ, ನಿಮಗೆ ತಲಾತಲಾಂತರದಿಂದ ಆಗಿರುವ ನೋವನ್ನು, ಅವಮಾನವನ್ನು ನಿಮ್ಮ ಅದ್ಭುತ ಕ್ರಿಯಾಶೀಲತೆಯಲ್ಲಿ ದುಡಿಸಿಕೊಳ್ಳಿ ಎನ್ನುತ್ತಾರೆ.

## ಪುಸ್ತಕ ವಿಮರ್ಶೆ

ಜೆ. ಬಿಲ್ಲಯ್ಯನವರ ಲೇಖನ ಅನುಭವಗ್ರಾಹ್ಯವಾಗಿದೆ. ದೇ. ಜವರೇಗೌಡ ಅವರು ತುಂಬಾ ಪ್ರಾಮಾಣಿಕವಾಗಿ ತಮ್ಮ ಅಧಿಕಾರದ ಕಾಲದಲ್ಲಿ ದಲಿತರಿಗೆ ಒಳ್ಳೆಯ ಕೆಲಸ ಮಾಡಲಿಲ್ಲವೆಂದು ಒಪ್ಪಿಕೊಂಡಿದ್ದಾರೆ. ಅನಂತಮೂರ್ತಿ, ಗೋವಿಂದರಾವ್ ದೇಶಪಾಂಡೆ, ಎ.ಬಿ.ಷಾ, ಭಗವಾನ್‌ದಾಸ್, ಕುಲದೀಪನಯ್ಯಾರ್ ಧರ್ಮಲಿಂಗಮ್ ಮೊದಲಾದವರು ಮೂಲಭೂತವಾದ ಚಿಂತನೆಯನ್ನೇ ಕೊಟ್ಟಿದ್ದಾರೆ. ಇಂದೂಧರ ಹೊನ್ನಾಪುರ ಅವರ 'ಕಣ್ಣಾರೆ ಕಂಡ ಗುಜರಾತ್ ಚಳುವಳಿ' ನಮ್ಮ ಮೇಲ್ಜಾತಿಗಳ ಭಯಂಕರ ಮನಸ್ಸಿಗೆ ಕನ್ನಡಿ ಹಿಡಿದಿದೆ. ಎಲ್ಲರೂ ಒಂದೇ ವಿಷಯವನ್ನು ಮಾತಾನಾಡಿರುವುದರಿಂದ ಅನೇಕ ಕಡೆ ಪುನರಾವರ್ತನೆ ಗೋಚರಿಸುತ್ತದೆ, ಎಂಬ ದೋಷವೊಂದನ್ನು ಬಿಟ್ಟರೆ, ಒಟ್ಟಿನಲ್ಲಿ ನಮ್ಮ ಸಾಮಾಜಿಕ ಸಂದರ್ಭದಲ್ಲಿ ದಲಿತರು ಇಂದು ಬದುಕಲು ಎಂಥ ಹೋರಾಟ ಮಾಡಬೇಕೆಂಬುದನ್ನು 'ಮೊಸಲಾತಿ' ಪುಸ್ತಕ ಸಮರ್ಥವಾಗಿ ಮನಗಾಣಿಸುತ್ತದೆ.

● ಶಿವರಾಮು ಕಾಡನಕುಪ್ಪೆ

## ಒಡಲಾಳದ ಕಿಡಿ

ಪಂಚಮಕ್ಕೆ ಆಜೀವ ಚಂದಾದಾರಳಾಗಲು ಇಷ್ಟ ಪಡುವೆ. ಜಾತಿ ವರ್ಗ ಎರಡೂ ತೊಡೆದು ಹೋಗಬೇಕು. ಉಸಿರು ಕಳಕೊಂಡಿದ್ದ ನನ್ನ ಜನರ ದನಿಯೇ ಪಂಚಮ ಅನ್ನಿಸಿದೆ. ಅವರ ಒಡಲಾಳದ ಕಿಡಿಗಳನ್ನು ಇಲ್ಲಿ ಕಾಣುತ್ತಿದ್ದೇನೆ.

—ಎನ್. ಎಸ್. ಪುಷ್ಪ

## ನಮ್ಮ ಮಾತು

### ಬರುವ ಹೋಗುವ ಸ್ವಾತಂತ್ರ್ಯ

ಸ್ವಾತಂತ್ರವು ತನ್ನಹೊಟ್ಟೆಯೊಳಗೆ ದಲಿತರ ಕೊಲೆ ಸುಲಿಗೆಯನ್ನು ಕಟ್ಟಿಕೊಂಡು ಬರುತ್ತದೆ, ನಗುತ್ತದೆ, ಹೋಗುತ್ತದೆ. ಬಂದಬಂದಾಗಲೆಲ್ಲ ಬಡತನದ ರೇಖೆ ಕೆಳಕ್ಕೆ ಜನಸ್ತೋಮವನ್ನು ತಳ್ಳಿ ತುಳಿದು ಅದರ ಮೇಲೆಯೇ ನಮ್ಮ ಸ್ವಾತಂತ್ರ ನಿಲ್ಲುವುದು. ಈ ಸಲದ ಸ್ವಾತಂತ್ರವು ವಿಷಮದ್ಯ ಕುಡಿಸಿ ಸಾಯಿಸಿ ಆ ಸತ್ತವರು ಪ್ರಾಣಿಗಳಿಗಿಂತಲೂ ಕಡೆ ಅನ್ನಿಸಿದೆ, ಬೆಸ್ತರ ಪಾಳ್ಯದ ಶಿವಣ್ಣನ ಮುಖಕೆ ಆಸಿಡ್ ಎರಚಿ ಆತನ ಮುಖವನ್ನು ಕಳೆದಿದೆ, ಕಾಮುಗೆರೆಯಲ್ಲಿ ಇಬ್ಬರು ಪ್ರೇಮಿಗಳ ಉಸಿರು ತೆಗೆದಿದೆ ಇತ್ಯಾದಿ ಹೀಗೆ ಇಂಥ ಕ್ರೂರ ಮಾಲೆ ಹಾಕಿಕೊಂಡು ಸ್ವಾತಂತ್ರ್ಯ ಬರುತ್ತದೆ. ಹೋಗುತ್ತದೆ.

### ಹುಣಸಿಕೋಟೆ ಹೋರಾಟಕ್ಕೆ ಜಯ

ದಲಿತ ಸಂಘರ್ಷ ಸಮಿತಿ ಪ್ರಥಮ ಬಾರಿಗೆ ಐತಿಹಾಸಿಕ ಹೋರಾಟವೊಂದರಲ್ಲಿ ಜಯಗಳಿಸಿದೆ. ಹೋರಾಟದ ಹಾದಿಯಲ್ಲಿ ಇದೊಂದು ಮಹತ್ವದ ಮೈಲಿಗಲ್ಲು, ಹೋರಾಟದಿಂದಲೇ ದಲಿತರ ಬಂಧ ವಿಮೋಚನೆ ಸಾಧ್ಯ ಎನ್ನುವುದು ಈ ಘಟನೆಯಿಂದ ಸಾಬೀತಾಗಿದೆ. ಇಡೀ ರಾಜ್ಯ ಆಶ್ಚರ್ಯದಿಂದ ಪುಲಕಗೊಳ್ಳುವಂತ ನಿರ್ಧಾರಕ್ಕೆ ನ್ಯಾಯಾಂಗ ಬಂದಿದೆ. ಹುಣಸಿಕೋಟೆಯ ಶೇಷಗಿರಿಯಪ್ಪನನ್ನು ಕೊಲೆ ಮಾಡಿದ ಮಾಲೂರು ತಾಲ್ಲೂಕು ಅಭಿವೃದ್ಧಿ ಮಂಡಲಿ ಅಧ್ಯಕ್ಷ ಆರ್.ಕೃಷ್ಣೇಗೌಡ ಈಗ ಜೀವಾವಧಿ ಶಿಕ್ಷೆಗೊಳಗಾಗಿದ್ದಾನೆ. ಜನಪರ ನಿಲುವು ತಳೆದ ನ್ಯಾಯಾಧೀಶ ಸೋಮಶೇಖರ್ ಈ ನಿಟ್ಟನಲ್ಲಿ ಅಭಿನಂದನಾರ್ಹರು. ಕೊಲೆ ಮಾಡೋದು ಕೃಷ್ಣೇಗೌಡ ಅವರಂಥವರ ನಿತ್ಯ ಕಸುಬು. ಅಧಿಕಾರ ಹಿಡಿದವರ ಮರ್ಜಿ ಅವರಿಗಿರುವುದರಿಂದ ನ್ಯಾಯಾಂಗ ಅಂಥವರನ್ನು ಶಿಕ್ಷಿಸುವ ಗೋಜಿಗೆ ಸಾಮಾನ್ಯವಾಗಿ ಕೈ ಹಾಕುವುದಿಲ್ಲ. ಆದರೆ ಜನಪರ ಹೋರಾಟವೊಂದಕ್ಕೆ, ಆಳುವವರ ಗುಂಡಿಗೆಯನ್ನು ಅಲ್ಲಾಡಿಸಿ, ನ್ಯಾಯ ಪಡೆಯುವ ಸಾಮರ್ಥ್ಯ ಇದೆ ಅನ್ನುವುದು ಈ ಘಟನೆಯಿಂದ ಸ್ಪಷ್ಟವಾಗಿದೆ. ಈ ಜಯಕ್ಕಾಗಿ ಸಂಘರ್ಷ ಸಮಿತಿ ಸತತ ಹೋರಾಟ ಮಾಡಿತು. ರಾಜ್ಯದ ಉದ್ದಗಲಕೂ ಚಳವಳಿಯನ್ನು ವ್ಯಾಪಿಸಿತು. ಕಳೆದ ವರ್ಷ ಮೇ ತಿಂಗಳಿನಲ್ಲಿ ನಡೆದ ಐತಿಹಾಸಿಕ ಜಾಥದಲ್ಲಿ ನೊಂದ ಮನಸ್ಸುಗಳು ಹಿಡಿದ ಜ್ವಾಲೆ, ಇಂದು ಫಲ ನೀಡಿದೆ.

### ಎಸ್. ಪಿ. ರೇವಣಸಿದ್ಧಯ್ಯನವರಿಗಿದು ತರವಲ್ಲ !

ರತ್ನಪುರಿಯ ಕೊಲೆ ಸುಲಿಗೆಗೆ ಸವರ್ಣೀಯರ ದುಡ್ಡು ಮತ್ತು ಪೋಲೀಸರ ಅಸಡ್ಡೆ ಕಾರಣವಾಗಿರುವುದೂ ಸಾಕಾಗದೆ ಪೋಲೀಸ್ ಅಧಿಕಾರಿ ರೇವಣಸಿದ್ದಯ್ಯನವರೇ ಸವರ್ಣೀಯರು ಘಟನೆಗೆ ಸಂಬಂಧಿಸಿ ಮೊದಲು ಕೊಟ್ಟಿದ್ದ ಸಹಜ ಕಂಪ್ಲೇಟನ್ನು ಹರಿಸಿ, ಅಸ್ಪೃಶ್ಯರ ಮೇಲೆ ಬರುವಂತೆ ಕೃತಕ ಕಂಪ್ಲೇಟನ್ನು ಬರೆಸಿರುವರೆಂದು ಮನೆಮಾತಾಗಿದೆ. ಅಲ್ಲದೆ ಅಸ್ಪೃಶ್ಯರು ಕೊಡಲು ಹೋದ ಕಂಪ್ಲೇಟನ್ನು ಪೋಲೀಸ್ ತಿರಸ್ಕರಿಸಿ ಪೋಲೀಸ್ ನೇರಕ್ಕೆ ಕಂಪ್ಲೇಟನ್ನು ಬರೆಸಿಕೊಂಡಿರುವರು. ಹೇಳಿಕೆಯಲ್ಲಿ ಮಾತ್ರ ಸವರ್ಣೀಯರನ್ನು ಅರೆಸ್ಟು ಮಾಡಿರುವುದಾಗಿ ಪೋಲೀಸ್ ತಿಳಿಸಿದರೂ ನಿಜವಾಗಿ ಯಾರನ್ನು ಅರೆಸ್ಟು ಮಾಡದೆ ಅಪರಾಧಿಗಳನ್ನು ಕೋರ್ಟಿಗೆ ಬರುವಂತೆ ತಿಳಿಸಿ ಬಿಡಿಸಿರುವರು. ಇನ್ನು ಮುಂದೆ ಏನೆಲ್ಲ ಮಾಡುವರೊ ಎಂದು ಆತಂಕ ಪಡಲು ಇದಿಷ್ಟು ಸಾಕು. ಮೇಲಿನ ದುರ್ಘಟನೆ ನಡೆದ ಸಂದರ್ಭದಲ್ಲಿ ತಮ್ಮ ಮೇಲು ಕೇಸು ತಿರುಗಬಹುದೆಂದು ಕಂಗಾಲಾಗಿದ್ದ ಸವರ್ಣೀಯರಿಗೆ ಹುಣಸೂರು ಪೋಲೀಸರು "ರೇವಣಸಿದ್ದಯನವರ ಹಿಡಿಯಿರಿ, ಎಸ್.ಪಿಯು ಮೇಲ್ನೋಟಕ್ಕೆ ನಿಷ್ಪಕ್ಷಪಾತವಾಗಿ ಕಂಡರೂ ಒಳಗೊಳಗೆ ಹರಿಜನರ ಮಟ್ಟಹಾಕುವರು" ಎಂದುದನ್ನು ಶ್ರೀ ರೇವಣಸಿದ್ದಯ್ಯ ನಿಜ ಮಾಡುತ್ತಿರುವರೆ? ಪೋಲೀಸ್‌ರು ಅಸ್ಪೃಶ್ಯರನ್ನು ಮುಸ್ಲಿಮರಾಗುವಂತೆ ಬಲತ್ಕರಿಸುತ್ತಿರುವರು.

ಸಂಪಾದಕ ರಾಮದೇವ ರಾಕೆ :ಸಂಪಾದಕ ಮಂಡಲಿ: ಪ್ರಕಾಶಕ ಎಚ್.ಗೋವಿಂದಯ್ಯ
ದೇವನೂರ ಮಹಾದೇವ, ಸಿದ್ದಲಿಂಗಯ್ಯ, ಇಂದೂಧರ ಹೊನ್ನಾಪುರ, ಕೆ. ಬಿ. ಸಿದ್ದಯ್ಯ, ಜಂಬಣ್ಣ ಅಮರ ಚಿಂತ
ಬೋಳವಾರು ಮಹಮದ್ ಕುಂಞ, ಶ್ರೀಧರ ಕಲಿವೀರ ಶಿವಾಜಿ ಗಣೇಶನ್, ದೇವಯ್ಯ ಹರವೆ (ವ್ಯವಸ್ಥಾಪಕ)
ಕೆ. ರಾಮಯ್ಯ, ರಂಜಾನ್ ದರ್ಗ, ಗುರುರಾಜ ಬೀಡಿಕರ್,
ಚಂದಾ ವಿವರ : ವಾರ್ಷಿಕ ಚಂದಾ : 10 ರೂಪಾಯಿ, ಅಜೀವ ಚಂದಾ : 200 ರೂಪಾಯಿ,
ವಿಳಾಸ : ಮಾಸ್ತಿಗುಡಿ, 2ನೇಕ್ರಾಸ್ ಅಶೋಕಪುರಂ ಮೈಸೂರು-570 008

### ಮನುಷ್ಯರಿರದ ಊರಲ್ಲಿ

ಹೆಸರು ಟಿ. ಎಂ. ಮಾದಯ್ಯ, ವಯಸ್ಸು ನಲವತ್ತು, ಹುಟ್ಟಿದ ಊರು ನಂಜನಗೂಡು ತಾಲ್ಲೂಕಿನ ತುಂನೇರಳೆ ಗ್ರಾಮ, ವೃತ್ತಿ ಪ್ರಾಥಮಿಕ ಶಾಲ ಉಪಾಧ್ಯಾಯ. ಇದರೊಡನೆ ಅಸ್ಪೃಶ್ಯರು, ಹಾಗಾಗಿ ಹಿಂದೂ ಮನಸ್ಸಿನ ಕ್ರೂರತೆಗೆ ಅನಾಗರಿಕತೆಗೆ ಬಲಿಯಾದವರು,



ಕೆಲವು ದಿನಗಳ ಹಿಂದೆ ಈ ಟಿ.ಎಂ. ಮಾದಯ್ಯ ಹಿಂಡು ಬಿಟ್ಟ ಕುರಿಯಂತೆ ಒಂಟಿಯಾಗಿ ಚಿಂತೆ ನಡೆದಾಡುವವಂತೆ ಓಡಾಡುತ್ತಿದ್ದರು, ಕಾರಣ ಈರಪ್ಪನ ಕೊಪ್ಪಲು ಎಂಬ ಮನುಷ್ಯರೇ ಇಲ್ಲದ ಅರ್ಥಾತ್ ಸವರ್ಣೀಯರೇ ಇರುವ ಹಳ್ಳಿಗೆ ಅರ್ಥಾತ್ ಅಸ್ಪೃಶ್ಯರಾದ ಕಾರಣಕ್ಕೆ ಮಾದಯ್ಯನವರಿಗೆ ಕುಡಿಯಲು ನೀರು ಸಿಗದ ವಾಸಿಸಲು ಮನೆ ಸಿಗದ ಊರಿಗೆ ವರ್ಗವಾಗಿತ್ತು. ವಿದ್ಯಾಧಿಕಾರಿ ರುದ್ರಪ್ಪ ಎಂಬಾತ ಸರಿಯಾಗಿ ಮಾಡುವೆ ಎಂದು ಹೀಗೆ ಮಾಡಿದ್ದನು. ಸ್ವಲ್ಪ ದಿನ ರಜಾ ಹಾಕಿ ಮಾದಯ್ಯ ಪುನಃ ವರ್ಗಕ್ಕೆ ನೋಡಿದರು, ಆದರೆ ಹಣದ ಮುಗ್ಗಟ್ಟಿಗೆ ಸಿಕ್ಕಿ ಮೈಸೂರಲ್ಲಿ ಬೆಳಗ್ಗೆ ಊಟ ಮಾಡಿಕೊಂಡು ನೀರು ಕುಡಿದುಕೊಂಡು ಆ ಹಳ್ಳಿಗೆ ಹೋಗಿ ಪಾಠ ಮಾಡಿ ರಾತ್ರಿ ಬಂದು ಊಟ ಮಾಡುವ ಪರಿಪಾಠ ಮಾಡುತ್ತಿದ್ದರು.

ಇತ್ತೀಚೆಗೆ, ವರ್ಗದ ಬಗ್ಗೆ ವಿದ್ಯಾಧಿಕಾರಿ ರುದ್ರಪ್ಪನವರಿಗೂ ಮಾದಯ್ಯನವರಿಗೂ ಮಾತು ಕತೆ ನಡೆದು ರುದ್ರಪ್ಪ ಮಾದಯ್ಯಗೆ ನೀನು ಹೊಲೆಯ, ಉಪ ನಿರ್ದೇಶಕನೂ ಹೊಲೆಯ, ನನ್ನೇನು ಕೇಳ್ತೀಯ? ಹೋಗೋ...... ಅಲ್ಲಿ ಹೋಗಿ ವರ್ಗ ಮಾಡಿಸ್ಕೊ" ಎಂದನಂತೆ, ಆ ಮೇಲೆ ರುದ್ರಪ್ಪನೇ ಪೋಲಿಸ್ ಸ್ಟೇಷನ್‌ಗೆ ಹೋಗಿ "ಮಾದಯ್ಯನು ನನ್ನನ್ನು .ದೃಷ್ಟಿಸಿ ನೋಡಿದ, ಬೈದ, ಪಾಠ ಕಲಿಸ್ತೀನಿ ಅಂದ' ಎಂದು ಕಂಪ್ಲೇಂಟು ಕೊಟ್ಟಿರುವನು.

ಪಂಚಮ ಮಾದಯ್ಯನವರಿಗೆ ಹಾಗೆಲ್ಲ ಮಾಡಿದಿರಾ ಎಂದು ಕೇಳಿದ್ದಕ್ಕೆ ಅತ ಇಲ್ಲವೆಂದರು, ಅದಕ್ಕೆ ಪಂಚಮವು ಮಾದಯ್ಯಗೆ "ರುದ್ರಪ್ಪನಿಗೆ ನೀವು ದೃಷ್ಟಿಸ ಬೇಕಿತ್ತು, ಬೈಯಬೇಕಿತ್ತು, ಪಾಠಕಲಿಸ್ತೀನಿಅನ್ನಬೇಕಿತ್ತು ಮತ್ತು ಪಾಠ ಕಲಿಸಬೇಕಿತ್ತು" ಎಂದಿತು,

# ದಲಿತರ ಮುಖಕ್ಕೆ ಆಸಿಡ್

(ಮೊದಲನೆ ಪುಟದಿಂದ)

ಒಕ್ಕಲಿಗರೇ ಹೆಚ್ಚು, ಅವರದ್ದೇ ಪ್ರಭಾವ. ಕೊಲೆಯಾಗಬೇಕಿದ್ದ ನರಸಿಂಹಯ್ಯ, ಅವರ ಮನೆಗೆ ಕರೆದುಕೊಂಡು ಹೋದ. ಅವರ ಅಮ್ಮಅಕ್ಕ ಎಲ್ಲ ಬಂದರು. ಅವರಕ್ಕ (ಶಿವಣ್ಣನ ತಾಯಿ) ಬಿಕ್ಕಿ ಬಿಕ್ಕಿ ಅಳುತ್ತಾ "ನನ್ನ ಮಗನ್ನಂತೂ ಸಾಯಿಸಿದ್ರು. ನನ್ನ ತಮ್ಮನ್ನಾದ್ರೂ ಉಳಿಸಿಕೊಡಿ ಸ್ವಾಮಿ, ಈ ಮನೆ ದೀಪ ಉಳಿಸಿ" ಅಂತ ಮೊರೆ ಇಟ್ಟರು. ಅವರನ್ನು ಸಮಾಧಾನಪಡಿಸುವಾಗ ಸಾಕು ಬೇಕಾಯಿತು. ಹಟ್ಟಿಯ ಎಲ್ಲರನ್ನೂ ಕರೆಯಿರಿ ಮಾತನಾಡುವ ಅಂತ ಒಬ್ಬ ಯುವಕನನ್ನು ಕಳಿಸಿದ್ವಿ. 'ಎಲ್ಲ ಮಲಿಕ್ಕಂಡವ್ರೆ ದೀಪ ಕೆಡಿಸವ್ರೆ ಕೂಗಿದ್ರು ತೆಗೆಯಲ್ಲ' ಅಂದ. ನಾವೇ ಎಲ್ಲರನ್ನೂ ಕರೆಯಲು ಹೋದ್ವಿ. ಯಾರ ಮನೇಲೂ ಬೆಳಕು ಇಲ್ಲ. ಜನರ ಸದ್ದೂ ಇಲ್ಲ. ಒಂದು ಮನೆ ಬಾಗಿಲು ತಟ್ಟಿ ಕೂಗಿದೆವು 'ನಾವು ನಿಮ್ಮವರೇ ತುಮಕೂರಿನಿಂದ ಬಂದಿದೀವಿ ಮಾತಾಡಬೇಕು ಬಾಗಿಲು ತೆಗೀರಿ' "ಗಂಡಸರು ಮನೇಲಿಲ್ಲ ಅಂತ ಹೇಳು" ಗಂಡು ದನಿಯೊಂದು ಒಳಗೆ ಪಿಸು ಗುಟ್ಟಿತು. ನಮ್ಮ ಮಾತಲ್ಲಿ ಬಾಗಿಲಸಂದಿಯಲ್ಲಿ ದೀಪ ಹಿಡಿದು ನೋಡಿ ತೆಗೆದರು "ಮೋಸದಿಂದ ಎಣ್ಣೆ ಎರಚುತ್ತಾರೆ ಸ್ವಾಮಿ, ಅದಕ್ಕೆ ಭಯ" ಅಂದರು. ಅಂತೂ ಕೆಲವರನ್ನ ಕೂಡಿಸಿದ್ವಿ. "ಈ ಎಲ್ಡು ಹುಡುಗ್ರು ಇಲ್ದಿದ್ರೆ ನರಸಿಂಹಯ್ಯನ್ನ ಕಬ್ಬಿನ ಬೀಜ ಕತ್ತರಿಸಿದಂಗೆ ಕತ್ತರ್ಸ್ತಿದ್ರುಸ್ವಾಮಿ" ಎಂದು ಹಿರಿಯರೊಬ್ಬರು ನಿಟ್ಟುಸಿರು ಬಿಟ್ಟರು.

ವೈಶಮ್ಯಕ್ಕೆ ಕಾರಣ ಕೇಳಿದಾಗ ನರಸಿಂಹಯ್ಯ ಹೇಳಿದ್ರು : "ನಾಲ್ಕು ವರ್ಷಗಳ ಹಿಂದೆ ಒಕ್ಕಲಿಗರ ಗಂಗಣ್ಣನಿಗೂ ನನಗೂ ತುಂಬಾ ಸ್ನೇಹ. ಆಗ **ನಾನು ಪಂಚಾಯ್ತಿ ಮೆಂಬರು.** ಯಾವ ಕೆಲಸಕ್ಕೂ ಜೊತೇಲಿ ಹೋಗ್ತಿದ್ವಿ. **ನಮ್ಮ ಸ್ನೇಹ ಆತನ ಮಗಳು ಶಾನಮ್ಮನ ಜೊತೆ ಪ್ರೇಮದಲ್ಲಿ ಬೆಳೆಯಿತು. ಶಾನಮ್ಮ ಮತ್ತು ನಾನು ಊರು ಬಿಟ್ಟು ದೇವಸ್ಥಾನದಲ್ಲಿ ಮದುವೆ** ಆದ್ವಿ. ಆಗಿನಿಂದ ಒಂದೇ ಸಮ ಕಿರುಕುಳ ಕೊಡ್ತಾರೆ. ಮೂರು ವರ್ಷ ಹೆಬ್ಬೂರಲ್ಲಿ ವಾಸ ಇದ್ವಿ. ಅನೇಕ ಸುಳ್ಳು ಕೇಸುಗಳನ್ನು ಹಾಕಿದ್ದಾರೆ ಅನೇಕ ಬಾರಿ ಕೊಲೆ ಯತ್ನ ಮಾಡಿದ್ದಾರೆ. ರಕ್ಷಣೆಗಾಗಿ ಸಬ್ ಇನ್ಸ್‌ಪೆಕ್ಟರಿಂದ ಹಿಡಿದು ಮುಖ್ಯಮಂತ್ರಿಗಳವರೆಗೆ ನಾನು ಮೊರೆ ಇಡದ ಅಧಿಕಾರಿಗಳಿಲ್ಲ." ಎಂದು ತಾವು ಕಳಿಸಿದ್ದ ಅರ್ಜಿಗಳ ಹತ್ತಾರು ದಾಖಲೆಗಳನ್ನು ತೋರಿಸಿದರು. "ಈ ಕ್ಷೇತ್ರದ ತಾಲ್ಲೂಕು ಬೋರ್ಡುಸದಸ್ಯ (ಎಂ.ಪಿ. ಲಕ್ಕಪ್ಪನ ಶಿಷ್ಯ) ರುದ್ರಯ್ಯನ ರಕ್ಷಣೆ ಅವರಿಗಿದೆ. ನಾವು ನಮ್ಮ ಜನ ಊರಿನ್ಯಾಗೆ ನೆಮ್ಮದಿಯಾಗಿ ಬದುಕೋಕೆ ಬಿಡಲ್ಲ. ಜೀವನ ಎಲ್ಲ ಕೋರ್ಟು ಕಛೇರಿ ಆಗದೆ. ನಮಗೆ ರಕ್ಷಣೇನೆ ಇಲ್ವ?''

ಸು. ೩೨ ವರ್ಷದ ನರಸಿಂಹಯ್ಯ ಮಿಡ್ಲ್ ಸ್ಕೂಲಿನವರೆಗೂ ಓದಿ, ವ್ಯವಹಾರ ಬಲ್ಲ ವ್ಯಕ್ತಿ. ಇಂದು ಊರು ಬಿಟ್ಟು ಅಲೆಯುವಂತಾಗಿದೆ. ಆಸಿಡ್ ಹಾಕಲು ಬಳಸಿದ್ದ ಸೀಸೆ, ಲೋಟ, ಹಾಗೂ ಹ್ಯಾಂಡ್‌ಗ್ಲೌಸ್‌ಗಳನ್ನು ಪೋಲಿಸರು ವಶಪಡಿಸಿಕೊಂಡಿದ್ದಾರೆ. ಈಗ ದಲಿತರನ್ನು ಯಾರೂ ಕೂಲಿ ನಾಲಿಗೆ ಕರೆಯದೆ ಬಹಿಷ್ಕರಿಸಿದ್ದಾರೆ. ಹಸಿವು ಮತ್ತು ಭಯಗಳಿಂದ ತತ್ತರಿಸಿರುವ ದಲಿತರು ರಕ್ಷಣೆಗಾಗಿ ಹಾತೊರೆಯುತ್ತಿದ್ದಾರೆ. **(ವರದಿ : ದೊ. ರಂಗಸ್ವಾಮಿ)**

## ಪ್ರೀತಿಯನ್ನು ಕೊಂದ ಕೈಗಳು

(ಮೊದಲನೆ ಪುಟದಿಂದ)

ಕಿಂಡಿಯಲ್ಲಿ ಇಣುಕಿ ನೋಡಲು ಬೆಳಕಲ್ಲಿಗಂಡು–ಹೆಣ್ಣು ಹೆಣಗಳೆರಡು ಬಿದ್ದಿರುವುದು ಕಾಣಿಸಿತು.

ಅಸ್ಪೃಶ್ಯ ಹುಡುಗನನ್ನು ತನ್ನ ಮಗಳು ಪ್ರೀತಿಸುತ್ತಿರುವುದು ತಿಳಿದು ಕೆರಳಿದ ಸವರ್ಣೀಯ ತಂದೆ ಚಿಕ್ಕಣ್ಣೆಗೌಡ ಅಸ್ಪೃಶ್ಯ ಹುಡುಗನನ್ನು ಚಚ್ಚಿ ಕೊಲೆ ಮಾಡಿ ರೊಚ್ಚು ತೀರಿಸಿಕೊಂಡ. ಜೊತೆಗೆ, ಅಸ್ಪೃಶ್ಯ ಹೃದಯವನ್ನು ಪ್ರೀತಿಸಿದ್ದ ತನ್ನ ಮಗಳಿಂದ ಈ ಕೊಲೆ ಬಹಿರಂಗಗೊಳ್ಳುವ ಮೊದಲೇ ಮುದ್ದು ಮಗಳನ್ನೂ ಕೊಂದು ಹಾಕಿದ.

ಆದರೆ, ಹಾಡು ಹಗಲಿನಂತಿರುವ ಈ ಕೊಲೆಗಳೂ ಚಿಕ್ಕಣ್ಣೇಗೌಡನ ಹಣದಿಂದಾಗಿ ಎಂಜಲು ಡಾಕ್ಟರ್ ಮತ್ತು ಪೋಲೀಸರುಗಳಿಂದ ಮುಚ್ಚಿ ಹೋಗುತ್ತಾ ಇವೆ. ಹೆಣಗಳ ಕತ್ತಿಗೆ ಹಗ್ಗ ಬಿಗಿದು ಮುದ್ದು ಹೃದಯಗಳ ಕೊಲೆಗಳನ್ನು ಇವರೆಲ್ಲ ಸೇರಿ " ಆತ್ಮಹತ್ಯೆ '' ಮಾಡ ತೊಡಗಿದ್ದಾರೆ. ತಮ್ಮ ಕಣ್ಣುಗಳಂತಿದ್ದ ಮಗ ಕೋದಂಡರಾಮುನನ್ನು ಕಳೆದುಕೊಂಡ ತಂದೆ–ತಾಯಿ ಅನ್ನ ನೀರು ಮುಟ್ಟದೆ ದುಃಖಿಸುತ್ತಿದ್ದಾರೆ. ಕರಾಳ ಇತಿಹಾಸಗಳ ದಲಿತರು ಇಂಥ ಅನ್ಯಾಯಗಳ ವಿರುದ್ಧ ಸಿಡಿಯದಂತೆ ತಡೆಯಲು ಪೋಲೀಸರು ಕಾಮಗೆರೆಯಲ್ಲಿ ಕಾವಲು ಕಾಯುತ್ತಿದ್ದಾರೆ. ಹನೂರು ಕ್ಷೇತ್ರದ ಎಮ್ಮೆಲ್ಲೆ ರಾಜುಗೌಡ ಕೊಲೆಗಾರರಿಗೆ ನೆರಳು ಮಾಡಿಕೊಂಡು ಪ್ರೋತ್ಸಾಹಿಸುತ್ತಿದ್ದಾರೆ.

## ಅಪರಾಧಿ !

ಗಟ್ಟಿ ಮುಟ್ಟಾದ ಮೈಕಟ್ಟಿನ ಒಬ್ಬ ಯುವಕ ಹಸಿವಿನಿಂದ ಸೊರಗಿ, ನೋವಿನ ಹಾಡನ್ನು ಹೇಳುತ್ತ ಬೀದಿಯಲ್ಲಿ ಕೈ ಚಾಚಿ ಕೂತು ಭಿಕ್ಷೆ ಬೇಡುತ್ತಿದ್ದ.

ಹೊತ್ತು ಮುಳುಗಿತು, ಅವನ ತುಟಿ ನಾಲಿಗೆ ಒಣಗಿದವು, ಹೊಟ್ಟೆ ಖಾಲಿಯಾದಂತೆ ಕೈಯೂ ಬರಿದಾಗಿತ್ತು. ಕೊನೆಗೆ ತಾನು ವಾಸಿಸುತ್ತಿದ್ದ ಪಟ್ಟಣವನ್ನು ಬಿಟ್ಟು ಹೊರಟನು. ಅಲ್ಲೊಂದು ಮರದ ಕೆಳಗೆ ಕೂತು ತನ್ನ ಸ್ಥಿತಿಗೆ ಬಿಕ್ಕಿ ಬಿಕ್ಕಿ ಕಣ್ಣೀರಿಟ್ಟನು. ಹಸಿವು ಒಳಗೊಳಗೆ ಅವನನ್ನು ತಿನ್ನುತ್ತಿತ್ತು. ಕಣ್ಣುಗಳನ್ನು ಆಕಾಶಕ್ಕೆ ಅಗಲಿಸಿ ಹೇಳಿದ :

''ದೇವನೆ, ಕಲಿಯುವ ಆಸೆಯಿಂದ ನಾನು ಪಾಠಶಾಲೆಗಳ ಬಾಗಿಲಲ್ಲಿ ನಿಂತು ಗೋಗರೆದೆ. ಬಡವ ನನಗೆ ಅವಕಾಶವಿರಲಿಲ್ಲ. ಹೊಟ್ಟೆ ತುಂಬಿಸಿಕೊಳ್ಳಲು ಯಾವ ಕೆಲಸವಾದರೂ ಸರಿ ಎಂದು ಅಲೆದಾಡಿದೆ, ಸಿಕ್ಕಲಿಲ್ಲ. ಹತಾಶನಾಗಿ ಭಿಕ್ಷೆಗೆ ಕೈಯೊಡ್ಡಿದಾಗ ನಿನ್ನ ಭಕ್ತರೆನಿಸಿಕೊಂಡವರು ಹೇಳಿದರು : 'ಇವನು ಧಾಂಡಿಗ, ಸೋಮಾರಿ ಮೈ ಬಗ್ಗಿಸಿ ಕೆಲಸ ಮಾಡಲಾರದೆ ಭಿಕ್ಷೆ ಬೇಡುತ್ತಾನೆ'.

ಓ ದೇವನೆ! ನನ್ನ ತಾಯಿಗೆ ಮಗನಾಗಿ ನಾನು ಭೂಮಿಗೆ ಬಂದೆ, ನಾನು ಸಾಯುವ ಮುಂಚೆ ಭೂಮಿಯು ನನ್ನನ್ನು ನಿನ್ನ ಕಡೆಗೆ ದಬ್ಬುತ್ತಿದೆ.

ಇದ್ದಕ್ಕಿದ್ದಂತೆ ಆ ಯುವಕನ ಮಾತು ಬದಲಾಯಿತು. ಅವನ ರಾವುಗಣ್ಣಿನಲ್ಲಿ ಆಶಾಭಾವನೆ ಖಚಿತವಾಗಿತ್ತು. ಅವನಿಗೆ ನೆರಳು ಕೊಟ್ಟ ಮರದಿಂದ ಒಂದು ದಪ್ಪ ರೆಂಬೆಯನ್ನು ಮುರಿದುಕೊಂಡು ತಾನು ಬಿಟ್ಟು ಬಂದ ಪಟ್ಟಣದ ಕಡೆ ತೋರಿಸುತ್ತ ಎಚ್ಚರಿಕೆಯ ಧ್ವನಿಯಲ್ಲಿ ಕೂಗಿ ಹೇಳಿದ :

''ನಾನು ಅನ್ನ ಅನ್ನ ಎಂದು ಗಂಟಲುಕಿತ್ತೋಗುವಂತೆ ಕಿರುಚಿಕೊಂಡೆ ನಿಮಗೆ ಕೇಳಿಸಲಿಲ್ಲ. ಪ್ರೀತಿ, ಕರುಣೆಯ ಹೆಸರಿನಲ್ಲಿ ಅನ್ನ ಕೇಳಿದೆ, ಮನುಷ್ಯರೆನಿಸಿಕೊಂಡ ನೀವು ನಿಡಲಿಲ್ಲ. ಈಗ ನನ್ನ ಮಾರ್ಗ ಕಂಡುಕೊಂಡಿದ್ದೇನೆ. ನಿಮ್ಮಲ್ಲಿಗೆ ಬರುತ್ತೇನೆ. ಮೈಯಲ್ಲಿ ಉಳಿದಿರುವ ಶಕ್ತಿಯಿಂದ ಅನ್ನಗಳಿಸಿ ಕೊಳ್ಳುತ್ತೇನೆ".

(ಕಲೀಲ್ ಗಿಬ್ರಾನ್ ಬರಹಗಳಿಂದ)

---

# ಈ ಭಾರತದಲ್ಲಿ ನಾನೇಕೆ ಹುಟ್ಟಿದೆ!

ನನಗೆ ಕನಸು ಬೀಳುವುದು ಜಾಸ್ತಿ. ಒಮ್ಮೊಮ್ಮೆ ಅತಿ ಎನಿಸಿ ಇದೇನು ರೋಗವೊ ಏನೋ ಎಂಬ ಅನುಮಾನ ಬರುತ್ತದೆ. ಜೀವನದಲ್ಲಿ ಸಾಧಿಸಲಾಗದ್ದನ್ನು ಕನಸಿನಲ್ಲಿ ಸಾಧಿಸಿದವರಂತೆ ನಾನೇನೂ ನನ್ನ ಕನಸುಗಳಿಂದ ಖುಷಿಗೊಳ್ಳಲ್ಲ. ಒಂದು ತುತ್ತು ಕೂಳಿಗಾಗಿ ಇಂದು ಭಾರತದಲ್ಲಿ ಜೀವನ ಎಷ್ಟು ಅಸ್ತವ್ಯಸ್ತವಾಗಿದೆ ಎಂದು ಯೋಚಿಸುತ್ತಿದ್ದರೆ ಅದೇ ಚಿತ್ರ ಕನಸಿನಲ್ಲೂ ಕಾಣುತ್ತದೆ. ನಾನು ಸಣ್ಣವನಿದ್ದಾಗ, ಭಾರತದಲ್ಲಿ ಹುಟ್ಟಿದ್ದಕ್ಕೆ ಹೆಮ್ಮೆ ಎನಿಸುತ್ತಿತ್ತು. ಇಂದು ಈ ಭಾರತದಲ್ಲಿ ಯಾಕೆ ಹುಟ್ಟಿದೆ ಎಸಿಸುತ್ತದೆ. ಪ್ರಪಂಚದ ಎಲ್ಲಾ ಹೊಲಸು ವ್ಯವಸ್ಥೆ ನಮ್ಮನ್ನಾವರಿಸಿಕೊಂಡಿದೆ. ಇಂದಿನ ರಾಜಕಾರಣಿಗಳ ಕುಟಿಲತೆ, ವಿದ್ಯಾವಂತರ, ವಿದ್ವಾಂಸರ ಬೇಜವಾಬ್ದಾರಿ ಇವೆಲ್ಲಾ ತಲೆ ತಿನ್ನುತ್ತವೆ. ಈ ಹಾಳಾದ ಸರ್ಕಾರಿ ಕೆಲಸಕ್ಕೆ ಅದರಲ್ಲೂ ಗುಮಾಸ್ತನಾಗಿ ಸೇರಿದ್ದೇ ಒಂದು ದೊಡ್ಡ ತಪ್ಪಾಯಿತು. ಮೇಲಿಂದ ಬಂದು ಸೂಚನೆಗಳು ಎಷ್ಟೇ ಕ್ಷುಲ್ಲಕವಾಗಿದ್ದರೂ, ಮನಸ್ಸಿಲ್ಲದ ಮನಸ್ಸಿನಿಂದ ಮತ್ತೊಬ್ಬರಿಗೆ ರವಾನಿಸಬೇಕು. ಅನಗತ್ಯ ಅಂಕಿ–ಸಂಖ್ಯೆಗಳನ್ನು ಕಲೆ ಹಾಕಿ, ಕೂಡಿ ಕಳೆದು, ಭಾಗಿಸಿ ಶೇಕಡವಾರು ವಿಲೇವಾರಿ ತೆಗೆದು ಒಂದು ಬೋಗಸ್ ರಿಪೋರ್ಟು ಕಳಿಸಬೇಕು. ಸತ್ತ ಫೈಲುಗಳಿಗೆ ಜೀವಕೊಟ್ಟು ಜನಸಾಮಾನ್ಯನಿಗೆ ಎಷ್ಟು ಕಿರುಕುಳ ಕೊಡಬೇಕೊ ಅಷ್ಟು ಕೊಡಬೇಕು. ಈ ಮಧ್ಯೆ ದರ್ಪದ ಅಧಿಕಾರಿಯಿಂದ ಏನಾದರೊಂದು ಮಾತು ಕೇಳಬೇಕು. ಈಗ ಈ ಕೆಲಸದಿಂದ ಮುಕ್ತಿ ಪಡೆಯಲು ಏನೆಲ್ಲಾ ಮಾಡಬಹುದೋ ಅದೆಲ್ಲವನ್ನು ಮಾಡುತ್ತಿದ್ದೇನೆ. ಆದರೂ ಇತ್ತೀಚೆಗೆ ನನಗೆ ಜೀವನವೇ ಬೇಸರವಾಗಿದೆ. ಎಲ್ಲಿ ನೋಡಿದರೂ ಲಂಚಗಾರಿಕೆ, ಮೋಸಗಾರಿಕೆ, ಸಾರ್ವಜನಿಕ ಹಣದ ಲೂಟಿ, ಅನ್ಯಾಯ, ಅತ್ಯಾಚಾರ, ಕೊಲೆ, ಗೋಳಿಬಾರು ದಿನಪತ್ರಿಕೆಗಳಲ್ಲಿ ನಿರಂತರ ಕಾಲಂಗಳಾಗಿ ಹೋಗಿವೆ. ವಿರೋಧ ಪಕ್ಷದವರೆನಿಸಿಕೊಂಡವರು ಕಾಂಗ್ರೆಗೆ ಮಿಲನವಾಗಿ ಅಧಿಕಾರ

## ಈ ನಾಡಿಗೊಂದು ಬಹಿರಂಗ ಪತ್ರ

ಪಡೆಯುವುದಕ್ಕೆ ಹವಣಿಸುತ್ತಿದ್ದರೆ, ಸಮತಾವಾದಿಗಳು ಹಾಗೂ ಸಮಾಜವಾದಿಗಳು ತಮ್ಮ ತಮ್ಮಲ್ಲೇ ತೆಗಳಿಕೊಂಡು ಕೂತಿದ್ದಾರೆ. ಒಟ್ಟನಲ್ಲಿ ಈಗಿನ ಸರ್ಕಾರ ಅನಕ್ಷರಸ್ತರನ್ನು ವಿದ್ಯಾವಂತರನ್ನಾಗಿ ಮಾಡಿದರೆ ಎಲ್ಲಿ ತಮ್ಮ ತಳ ಬುಡ ಮೇಲಾಗುತ್ತದೊ ಎಂದು ಈ ಅನಕ್ಷರಕುಕ್ಷಿಗಳನ್ನು ಜಾಗರೂಕತೆಯಿಂದ ಬೆಳಸಿಕೊಂಡು ಬರುತ್ತಿದೆ. ನಾನೂ ಸಹ ಇದುವರೆಗೆ ಸಮಾಜದಲ್ಲಿ ದೋಷಗಳನ್ನು ಸುಧಾರಿಸಲು ತೇಪೆ ಸುಧಾರಣೆಯ ಮೂಲಕ ಸಾಧ್ಯ ಎಂದು ತಪ್ಪು ತಿಳಿದಿದ್ದೆ. ಇಂಥವುಗಳಿಂದ ಮೂಲ ಸಮಸ್ಯೆ ಬಗೆಹರಿಯಲಾರದು ಎನಿಸುತ್ತದೆ. ಒಂದು ರೀತಿಯಲ್ಲಿ ನೋಡಿದರೆ ಭಾರತದಲ್ಲಿ ಮಾರ್ಕ್ಸ್‌ವಾದವೇ ಜಾಸ್ತಿ ಹೊಂದಿಕೊಳ್ಳುತ್ತದೆ ಎನಿಸಿದರೆ *Dictatorship of the proletariate* ಕೇವಲ ಮಾರ್ಕ್ಸ್‌ನ ಕನಸಾಗಿ ಉಳಿದಿದೆಯಲ್ಲ (ರಷ್ಯಾ ಮತ್ತಿತರ ಮಾರ್ಕ್ಸ್‌ವಾದಿ ರಾಷ್ಟ್ರಗಳಲ್ಲಿ) ಎಂದೆನಿಸುತ್ತದೆ. ಮೇಲಾಗಿ ಈ ಮಾರ್ಕ್ಸ್‌ವಾದಿ ಹಾಗೂ ಮಾವೋ ವಾದಿಗಳ ಒಂದು ಸಿದ್ಧಾಂತ ವಾಕ್ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದು, ವ್ಯಕ್ತಿಯನ್ನುಯಂತ್ರಕ್ಕಿಂತ ಕಡೆಯಾಗಿ, ಕಾಣುವುದು. ವಿರೋಧ ಪಕ್ಷ ಬೆಳೆಯದಂತೆ ನೋಡಿಕೊಳ್ಳುವುದು. ಈ ಕೆಟ್ಟ ಉದ್ದೇಶಗಳು ನನಗೆ ಬೇಸರ ತರಿಸುತ್ತದೆ. ನಾನಂತೂ ಈಗ್ಗೆ ಸಮತಾವಾದಿಯೂ ಅಲ್ಲ ಸಮಾಜವಾದಿಯೂ ಅಲ್ಲ. ಯಾವ ವಾದಿಯಾದರೂ, ಬಡತನ, ನಿರುದ್ಯೋಗ ವರ್ಗ ಹಾಗೂ ವರ್ಣಭೇದವಿಲ್ಲದ ಸಮಾಜ ಸೃಷ್ಟಿಸುವುದರ ಜೊತೆಗೆ ಮನುಷ್ಯನೊಬ್ಬನ ವ್ಯಕ್ತಿತ್ವಕ್ಕೆ ಬೆಲೆ ನೀಡುವಂತಿದ್ದರೆ ಸಾಕು.

ಇಷ್ಟೆಲ್ಲಾ ಯಾಕೆ ಬರೆದಿದ್ದೀನಿ ಗೊತ್ತಾಯ್ತು? ರಾತ್ರಿ ಕನಸಿನಲ್ಲಿ ನೀವೆಲ್ಲ ಈ ಬಗ್ಗೆ ಬಹಳ ಸೀರಿಯಸ್ಸಾಗಿ ನನ್ನೊಂದಿಗೆ ಮಾತಾಡಿದಂತಿತ್ತು.

● ಪಾಲಾಕ್ಷ, ಗುಲಬರ್ಗ

## ನೆಲ್ಸನ್ ಮಾಂಡೇಲಾನ ಕಪ್ಪು ಅನುಭವಗಳು

**ನೆಲ್ಸನ್ ಮಾಂಡೆಲಾ ದಕ್ಷಿಣ ಆಫ್ರಿಕಾದ ಕಪ್ಪು ಜನರ ನಾಯಕ. 1942ರ ಜೋಡನ್ಸ್ ಬರ್ಗ್‌ನ ವಕೀಲ ಮಂಡಲಿಯೊಂದರಲ್ಲಿ ನೆಲ್ಸನ್ ಮ್ಯಾಂಡೆಲ ನೌಕರನಾಗಿದ್ದಾಗ ಅವನಿಗಾದ ಎರಡು · ಅನುಭವಗಳನ್ನು ಅವನ ದಿನಚರಿಯಿಂದ ಆರಿಸಿಕೊಡಲಾಗಿದೆ.**

ನಾನು ಕಛೇರಿಗೆ ಹೋದ ಮೊದಲ ದಿನ : ಸುತ್ತಲು ಬಿಳಿಯರು. ನಾನು ಮತ್ತು ಗೌರ್‌ರ್‍ಯಾಡಿಕ್ ಇಬ್ಬರೇ ಕಪ್ಪು ಜನ. ಟೀ ಬರುವ ಹೊತ್ತಾಯಿತು. ಆಗ ಬಿಳಿಯ ಟೈಪಿಸ್ಟನೊಬ್ಬ ನನ್ನ ಕರೆದು ಹೇಳಿದ : "ನೋಡು ನೆಲ್ಸನ್, ನಮ್ಮ ಕಛೇರಿಯಲ್ಲಿ ವರ್ಣ ಭೇದವೇ ಇಲ್ಲ, ಟೀಯ ಹುಡುಗ ಟೀ ತಂದಾಗ ನಿನ್ನ ಪಾಲಿನದನ್ನು ನೀನೇ ತೆಗೊಂಡು ಕುಡಿ. ನಾವು ಎರಡು ಹೊಸ ಲೋಟಗಳನ್ನು ತರಿಸಿದ್ದೇವೆ. ನೀವು ಅವನ್ನೆ ಉಪಯೋಗಿಸಿರಿ. ಹೊಸಲೋಟಗಳ ಬಗ್ಗೆ ಗೌರ್‌ಗೂ ಹೇಳು. ಅವನ ಸಹವಾಸ ಹೆಚ್ಚು ಮಾಡಬೇಡ, ಅವನೊಬ್ಬ ದುಷ್ಟ ಪ್ರಭಾವದ ವ್ಯಕ್ತಿ," ಗೌರ್‌ಗೆ ಈ ವಿಷಯ ಹೇಳಿದೆ. ಅವನು ರೋಷದಿಂದ "ಆ ಬಿಳಿಯ ಏನಾದರೂ ಹೇಳಿಕೊಳ್ಳಲಿ, ಟೀ ಬರಲಿ, ನಾನು ಮಾಡಿದಂತೆ ಮಾಡು" ಎಂದ. ಟೀ ಬಂತು ಗೌರ್ ಹೊಸ ಲೋಟಗಳನ್ನು ಮುಟ್ಟಲಿಲ್ಲ, ಬಹಿಷ್ಕರಿಸಿದ. ಬಿಳಿಯರು ಕುಡಿಯುತ್ತಿದ್ದ ಮಾಮೂಲಿ ಲೋಟಗಳಲ್ಲೆ ಒಂದನ್ನೆತ್ತಿಕೊಂಡು ಟೀ ಕುಡಿಯತೊಡಗಿದ. ಬಿಳಿಯರ ಮುಖ ಕೋಪದಿಂದ ಕೆಂಪಗಾಗುತ್ತಿತ್ತು.

ಗೌರ್ ಜತೆಗಾಗಲಿ, ಟೈಪಿಷ್ಟ ಜತೆಗಾಗಲಿ ಜಗಳವಾಡಲು ಆಗ ನನಗೆ ಮನಸ್ಸಿರಲಿಲ್ಲ. ಹಾಗಾಗಿ ನಾನು ತಿಂಗಳಾನುಗಟ್ಟಲೆ ಟೀ ಕುಡಿಯಲೇ ಇಲ್ಲ.

ಕೆಲ ತಿಂಗಳ ನಂತರ ಇನ್ನೊಬ್ಬ ಹೊಸ ಬಿಳಿಯ ಟೈಪಿಸ್ಟ್ ನನ್ನ ಸಹಾಯಕಳಾಗಿ ಬಂದಳು. ಆಕೆಗೆ ಏನೂ ಕೆಲಸವಿಲ್ಲದಾಗ ನನ್ನ ಬಳಿ ಬಂದು ಏನಾದರೂ ಕೆಲಸವಿದೆಯೆ? ಎಂದು ಕೇಳುವ ವಾಡಿಕೆ. ಒಂದು ದಿನ ಟೈಪ್ ಮಾಡಬೇಕಾದ ವಿಷಯವೊಂದನ್ನು ಅವಳಿಂದ ಬರೆಸುತ್ತಾ ಇದ್ದೆ. ಆಗ ಬಿಳಿಯ ಕಕ್ಷಿದಾರನೊಬ್ಬ ಒಳಗೆ ಬಂದ. ಅವಳು ತುಂಬಾ ಪೇಚಾಡತೊಡಗಿದಳು. ನಾನು ಆಕೆಯ ಮುಖ್ಯಸ್ಥನಲ್ಲ ಎಂದು ತೋರಿಸಿಕೊಳ್ಳಲು ಆಕೆ ತನ್ನ ಪರ್ಸ್‌ನಿಂದ ಹಣ ತೆಗೆದು "ನೆಲ್ಸನ್ ಈಗಲೇ ಹೋಗಿ ನನಗೆ ಒಂದು ಹೇರ್‌ಸಾಂಪೂ ತಂದುಕೊಡು" ಎಂದಳು! (ಸಂಗ್ರಹ ರಂಭೆ)

# ಥೂ! ಈ ಭಾರತ ಮಾತೆಗಿಷ್ಟು ಬೆಂಕಿಹಾಕ !

ಹೆಚ್. ಎಸ್. ರಾಜೇಂದ್ರಸಿಂಗ್
ಹೆಗ್ಗಡದೇವನಕೋಟೆ

ಮೈಸೂರು ಜಿಲ್ಲೆಯಲ್ಲಿ ನನ್ನೂರು ಒಂದು ತಾಲ್ಲೂಕು ಎಂದೆನಿಸಿಕೊಂಡಿದೆ. ನಾನಿನ್ನು ಪ್ರೈಮರಿಸ್ಕೂಲ್ ಓದ್ತಾ ಇದ್ದಕಾಲ. ನಮ್ಮಪ್ಪ ನಮ್ಮವ್ವ ಆ ನನ್ನ ಸುತ್ತಲಿನ ಪರಿಸರ, ಗುಡಿಯಯ್ಯನ ಮೈ ಮೇಲೆ ಬರುತ್ತಿದ್ದ ಆತೀಶ, ವರ್ಷಕ್ಕೊಂದು ಜಾತ್ರೆ ಅಂದ್ಮೇಲೆ ನನಗೂ ಆ ದಲಿತರ ವಿಲನ್‌ಗಳಾದ ದೇವರುಗಳ ಮೇಲೆ ಸ್ವಲ್ಪ ನಂಬಿಕೆ ಇರಲೇಬೇಕು ತಾನೆ! ಇಸ್ಕೂಲ್ ಪಾಸ್ ಆಗಬೇಕಾದರೆ ಆ ದಂದ್ರ ದೇವರನ್ನು ಪೂಜೆ ಮಾಡ್ಲೆಬೇಕಲ್ಲವಾ? ನಮ್ಮಪ್ಪಂದು ನಮ್ಮವ್ವಂದು ಬೇರೆ ಒತ್ತಾಯ "ಮುಖ ತೊಳೆದು ಗಂಧದ ಕಡ್ಡಿ ಅಸ್ಲಾ" ದಿನ ಬೆಳಗಿನ ಮಾಮೂಲಿ ಉವಾಚವಿದು. ಅದಕ್ಕೆ ನಾವೆಲ್ಲ ಅಂದರೆ ಇಸ್ಕೂಲ್ ಐಕಳೆಲ್ಲ ಸೇರಿ ನಮ್ಮೂರು ಕಾಡು ದಾಟ ಆಂಜನೇಯನಿಗೆ ಪೂಜೆ ಮಾಡ್ತಿದ್ವೊ. ಮಾಡ್ದ್ರೆ ಪಾಸು ! ಇಲ್ಲದಿದ್ದರೆ ಫೇಲು ! ಅಂತ ಹೆದರಿಸೋವ್ರು. ಕರಿಕಲ್ಲಿಗೆ ದಿನವೂ ಅರಿಶಿನ ಕುಂಕುಮ ಗಂಧದಕಡ್ಡಿ ಹಚ್ಚೊವು ; ವಾರಕ್ಕೊಂದು ದಿನ ವಿಶೇಷ ಪೂಜೆ ಇಟ್ಕೊಳ್ಳವು; ಇದಕ್ಕಾಗಿ ಮನೇಲಿ ಈ ಹಾಳು ದೇವರಿಗೆ ಕಾಸು ಕದ್ದು ತಕ್ಕೊಂಡೋಗೋವು; ಸುಮಾರು ಇಪ್ಪತ್ತು-ಇಪ್ಪತ್ತೈದು ಮಂದಿ ವಿದ್ಯಾರ್ಥಿಗಳು ಹೋಗೆವು; ಜಾತಿಗೀತಿ ಒಂದೂ ಗೊತ್ತಿಲ್ಲದ ಕಾಲವದು.

ಹಾಗಿರುವಾಗ ಒಂದು ದಿನ ವಿಶೇಷ ಪೂಜೆ ಮಾಡ್ತಿದ್ವೊ. ಅಲ್ಲಿನ ಪೂಜಾರಿ ಬಂದ. ಬಂದವ್ನೆ ಹಠಾತ್ತನೆ ನೀವೆಲ್ಲಾ ಯಾವ್ಯಾವ ಜಾತಿಯವರು? ಅಂತ ಕೇಳ್ದ. ಗೊತ್ತಿರೊ ಹುಡುಗರು ಹೇಳ್ಕೊಂಡ್ರು. ಗೊತ್ತಿಲ್ದೆ ಇದ್ದವರು ನಾನು ಅಂತವನ ಇಂತವನ ಮಗ ಅಂತ ಹೇಳ್ಕೊಂಡ್ರು. ನಾನು ನಮ್ಮಪ್ಪನ ಹೆಸರೇಳ್ದೆ. ಅವನ ಕಣ್ಣೆಲ್ಲ ಕೆಂಪಗಾಗೋಯ್ತು. ನಡಿ ಆಚೆ ಅಂದ. ಕಾರಣ ನನಗೆ ತಿಳೀಲಿಲ್ಲ. ಹುಡುಗರಿಗೇಳಿ ಆಚೆ ನೂಕಿಸಿದ. "ಲೋ ಹುಡ್ಗ್ರಾ ಈ ವಲೇರ್‌ಅಟ್ಟಿಗಂಡ ಸೇರಸ್ಕಂಡಿದ್ದೀರಲ್ಲಾ ನೀವು ಪಾಸಾಯ್ತಿರ, ದೇವಸ್ಥಾನವೆಲ್ಲ ಕುಲಗೆಟ್ಟೋಯ್ತು" ಅಂದ. ನಾಳೆ ದಿನದಿಂದ ಅದೇನಾಯಿತೋ ಏನೋ ಒಬ್ರೂ ನನ್ನ ಕರೀಲಿಲ್ಲ. ನನ್ನತ್ರ ಕಾಸು ಮಾತ್ರ ಇಸ್ಕೋಳ್ಳೋರು, ಅರಸಿನ, ಕುಂಕುಮ ತಕ್ಕೊಳ್ಳೋರು. ಆಚೆ ನಿಲ್ಸಿ ಮೇಲಿಂದ ಪ್ರಸಾದ ಅಂತ ಅನ್ನೊ ಕಡ್ಲೇಪುರಿ ಹಾಕೋರು.

ದಿನಾಲೂ ನನಗೆ ಇದೇ ಯೋಚನೆ-ಗುಡಿಯಯ್ಯಾ ನನ್ನನ್ನೇಕೆ ಆಚೆ ನೂಕಿಸಿದ? ನಾನು ಮಾಡಿದ್ದೇನು? ನಮ್ಮವ್ವನು ವಾರಕ್ಕೆ ಮೂರಾವರ್ತಿ ನಿರೊಯ್ಸಿಕೊಡುವಳು, ಅಕ್ಕಮಾಧೇವಿಯಂತ ಬೆಳ್ಳಗಿನ ಹುಡುಗೆರೆಲ್ಲ ಕಟ್ಟೋದ ಇಂಜಿನ್‌ನಲ್ಲಿ ಕೂತು ಮುತ್ತು ಕೋಡೋರು, ಮನೆಗೋದರೆ ಅವರಪ್ಪಂದಿರು ಆಚೆ ನಿಲ್ಸೋರು. ನಾನುಒಂದು ದಿನ ಧೈರ್ಯಮಾಡಿ ದೇವಸ್ಥಾನಕ್ಕೆ ನುಗ್ಗದ್ರೆ ಏನಾದದ್ದು ಅಂತ! ಹೀಗೆ ಅವರಿಗಿಂತ ಮುಂದೆ ನಾನೇ ಹೋಗಿ ಪೂಜೆ ಮಾಡ್ಕೊಂಡು ಬಂದುಬಿಡ್ವ ಅಂತ ಯೋಚನೆ ಮಾಡಿ ದಿನವೂ ಪೂಜೆ ಅಂತ ಮಾಡ್ಕ ಬರ್ವೆ.

ಈ ವಿಷಯ ಹಾಗೂ ಹೀಗೂ ಆ ಹುಡುಗರಿಗೆ ತಿಳ್ದೋಯ್ತು. "ದೇವಸ್ಥಾನಕ್ಕೆ ನುಗ್ಗಿದ್ಯಾ?" ಅಂದವರೇ ಹುಣಸೇ ಕಡ್ಡಿಯಿಂದ ಚೆನ್ನಾಗಿ ಥಳಿಸಿದರು. ಅಳುತ್ತಾ ಓಡಿ ಬಂದವ್ನೆ ನಮ್ಮಪ್ಪ ನಮ್ಮವ್ವನಿಗೆ ಹೇಳ್ದೆ. "ನೀ ದೇವಸ್ಥಾನ ನುಗ್ಗಿದ್ದು ನಿಂದೆ ತಪ್ಪು. ನಾವೆಲ್ಲ ಕೆಳ ಜಾತಿಯವರು. ನಾವು ಅಲ್ಲಿಗೋಗೊಂಗಿಲ್ಲ, ನೀ ಹೋಗಿ ನಮ್ಗೆ ದೇವರು ದಯ್ಯಾ ಕೈ ಹಿಡಿದಂಗೆ ಮಾಡ್ತಿಯಾ?" ಅಂದವರೆ ಅವರೂ ನನ್ನ ಚೆನ್ನಾಗಿ ಬಾರ್ಸಿದ್ರು. ನನಗಂತೂ ಯಾಕೆ? ಏನೂ? ಅಂತ ದಿನವೂ ಯೋಚ್ನೆ.

ನಮ್ಮ ಸ್ಕೂಲಿನಲ್ಲಿ ಇದ್ದದ್ದೇ ನಾಲ್ಕು ಬೆಂಚು, ನಾಲ್ಕು ಮಣೆ. ಅದರಮೇಲೆ ನಾವು ಕೂರಂಗಿಲ್ಲ. ಅದರ ಮೇಲೆ ಸವರ್ಣೀಯರೆ ಕೂರ್ತಿದ್ರು. ನಮ್ಮಕೇರಿ ಐಕಳೆಲ್ಲ ನೆಲದ ಮೇಲೆ ಕೂರ್ತಿದ್ವೊ. ನಮ್ಮಸ್ಕೂಲ್ ಇದ್ದದು ಬ್ರಾಹ್ಮಣ ಕೇರಿ ಒಳ್ಗೆ. ದಾಹ ಆದರೆ ನೀರು ಕುಡಿಯೊಣ ಅಂದರೆ ಅಲ್ಲಿ ಯಾರ ಮನೇಲೂ ನೀರು ಕೊಡ್ತಿರ್ಲಿಲ್ಲ. ಎಷ್ಟೆ ದಾಹವಾಗಿದ್ದರು ನಮ್ಮಟ್ಟಿಗೆ ಬಂದು ಅಳಗೆ ನೀರೆ ಕುಡಿತಿದ್ದೆ. ಹೋಟೆಲು ಅಂತ ಸ್ಕೂಲ್ ಅಕ್ಕಪಕ್ಕ ಇರೋವು. ನಾವಂತೂ ಬಾಗಿಲೀಗೆ ಹೊಗೊಂಗಿಲ್ಲ ಇನ್ನೆಲ್ಲಿ ನೀರು? ಲಿಂಗಾಯಿತರೆಣ್ಣು ಅಕ್ಕಮಾದೇವಿ ಇಂಜಿನೀಯರ್ ಮಗಳು ಕದ್ದು ನೀರು ಕೋಡೋಳು ಯಾಕೆಂದ್ರೆ ನಾನು ಚೆನ್ನಾಗಿ ಲೆಕ್ಕ ಮಾಡ್ತಿದ್ದೆ ಅಥವಾ ದಿನವೂ ಹುಣಸೇಹಣ್ಣು, ಕಿತ್ಕೊಡ್ತಿದ್‌ನಲ್ಲ ಅದ್ಕೊ ನಂಗಂತೂ ಗೊತ್ತಿಲ್ಲ.

ದಲಿತರ ಕೇರಿಯಿಂದ ಮಿಡ್ಲಸ್ಕೂಲ್ ಸೇರ್ದ ಕೀರ್ತಿ ಈ ವರ್ಷ ನಂದು. ನಮ್ಮ ಸ್ಕೂಲ್‌ನ ಜವಾನ ಸವರ್ಣೀಯ ಜನಾಂಗಕ್ಕೆ ಸೇರಿದ್ದವನು. ಕಸ ನಮ್ಮ ಜಾತಿ ಐಕಳೇ ಗುಡಿಸಿಕೊಡ್ಬೇಕು, ಮೆಮೋ ಫಾರಂ ತಕ್ಕೊಂಡಗೋದು, ನೀಲಗಿರಿ ಗಿಡಕ್ಕೆ ನೀರು ಹೊಯ್ಯೋದು, ಸ್ಕಾಲರ್‌ಷಿಪ್ ಕೊಡೊದ್ರಲ್ಲಿ ಅರ್ಧ ದುಡ್ಡು ಮೇಷ್ಟ್ರಿಗೆ ಕೊಡ್ತಿದ್ವಿ. ಉಚಿತ ಬಟ್ಟೆ ಪುಸ್ತಕ ಅಂತ ನಮ್ಕೈಲಿ ಸಹಿ ಮಾಡಿಸಿಕೊಂಡು ಅಪ್ಪಣ್ಣನ ಸೊಸೈಟಿಗೆ ಹೆಡ್‌ಮೇಷ್ಟ್ರೇ ಮಾರಕ್‌ಬಿಡೋರು. ವಿದ್ಯಾಮಂತ್ರಿ ಗಣಪತಿಯ ಸ್ಥಾಪಿಸಿದ್ರು, ನಾವಂತೂ ಹತ್ರಕ್ಕೂ ಹೋಗೋಂಗಿಲ್ಲ. ಚಿಕ್ಕಣ್ಣ ಮೇಷ್ಟ್ರು ಕೊಡೋ ಕಾಗದ ಸರಸಮ್ಮ ಮೇಡಂಗೆ ತಕ್ಕೊಂಡೋಗಿ ಕೊಡೋದು ನಮ್ಮ ಕೆಲಸ. ಅಷ್ಟೊತ್ತಿಗೆ ಏಳನೇ ಕ್ಲಾಸ್ ಮಾಡಿ ಊರಿಂದ ಒಂದು ಮೈಲಿ ಆಚೆ ಇರುವ ಹೈಸ್ಕೂಲ್ ಪ್ರವೇಶ.

ಅಲ್ಲೂ ನಮ್ಜಾತಿ ಐಕಳಿಗೆ ಇದೇ ಗೋಳು. ಸ್ಕೂಲ್ ದೂರ ಅಂತ ಒಂದ್ ಬಟ್ಲಲ್ಲಿ ನುಗ್ಗೆ ಸೊಪ್ಪಿನ ತಾಳದ ಅನ್ನಾನು ತಕ್ಕೊಂಡೋಗಿ ಮಧಾಹ್ನದೊತ್ತು ನಾವ್ರು ಬೇರೆ ಕುತ್ಕೊಂಡ್ ತಿನ್ತಿದ್ವೊ. ಅವರಾರೂ ನಮ್ಮನ್ನ ಸೇರಿಸ್ತಿರ್ಲಿಲ್ಲ. ಬಾವಿಲಿ ನೀರು ಸೇದ್ರೆ ಅವರೆ ಕುಡ್ಕೊಳ್ಳೋರು ನಾವು ½ ಮೈಲಿ ದೂರದ ತಾರಕ ಹೊಳೆಗೋಗಿ ಕರೆಲಿ ಕುತ್ಕೊಂಡು ನೀರುಕುಡ್ಕೊಂಡು ಬರ್ಬೇಕು. "ಹೊಳೆ ಕರೆಗೆ ಹೊಗ್ಬೇಡ ಗಾಳಿ ಇರ್ತದೆ" ಅವ್ವನ ಬುದ್ಧಿ ಮಾತು. ಹೈಸ್ಕೂಲ್‌ನಲ್ಲೂ ಗಣಪತಿ ಕೂರ್ಸಿದ್ರು. ಪೂಜೆ ಮಾಡೋ ಹೈದ ಬ್ರಾಹ್ಮಣರದು. ಹಾಡೇಳೋ ನಾವು ಆಚೆ ನಿತ್ಕೊಂಡು "ಕೀರ್ತನೆ" ಅನ್ನೊ ಕೆಟ್ಟ ಪದ್ಯ ಹಾಡ್ತಿದ್ವೊ.

ಪಿ.ಯು.ಸಿ. ಸೇರ್ದೆ. ಆರ್ಟ್ಸ್ ಅಂದರೆ ಏನೂ? ಸೈನ್ಸ್ ಅಂದರೆ ಏನೂ ಒಂದು ಗೊತ್ತಿಲ್ಲ. ನಾನು ಡಾಕ್ಟರ್ ಆಗಬೇಕು ಅಂತ ಆಸೆ. ಅಪ್ಪಂತವೂ ದುಡ್ಡಿಲ್ಲ, ಸೈನ್ಸ್ ಸಬ್ಜೆಕ್ಟ್ ಅಲ್ಲಿರಲಿಲ್ಲ. "ನಮ್ಮ ಜಾತಿಯವರು ಸೈನ್ಸ್ ಓದೊಕ್ಕಾಗಲ್ಲ ಆರ್ಟ್ಸ್‌ಗೆ ಸೆರ್ಕೋ" ಅಂತ ಮೇಷ್ಟ್ರು ಉಪದೇಶ. ಸರಿ ಸೇರ್ದೆ. ಲೈಬ್ರರಿ ಪರಿಚಯ ಹೊಸದು ಬೇಕಾದಷ್ಟು ಪುಸ್ತಕ ಇರೋವು. ಆದರೆ ಅದನ್ನೆಲ್ಲಾ ಬೇರೆ ಜಾತಿ ಹುಡುಗರಿಗೆ ಕೊಟ್ಟುಬಿಡುತ್ತಿದ್ದರು. ಮೇಷ್ಟ್ರು ನೋಟ್ಸ್ ಕೋಡ್ತಿರ್ಲಿಲ್ಲ. ಸರಿಯಾಗಿ ಪಾಠನೂ ಮಾಡ್ತಿರ್ಲಿಲ್ಲ. ವಿಷಯಾನು ತಿಳಿತಿರ್ಲಿಲ್ಲ. ಅಂಗೂ ಇಂಗೂ ಹುಡುಗೀರು ಕೊಟ್ಟ ಪುಸ್ತಕ ಓದ್ಕೊಂಡು ಪಾಸ್ ಮಾಡಿ ಬಿ.ಎ. ಓದೋಕೆ ಮಹರಾಜ ಕಾಲೇಜು

ಮುಂದಿನ ಪುಟಕ್ಕೆ

ಭಾರತದ ಸ್ವಾತಂತ್ರ್ಯಕ್ಕೆ ಎರಡು ಕೊಡುಗೆಗಳು .................. ಅನುಭವದ ಗಣಿಯಿಂದ

# ಹೇಳಿ, ಹೇಳಿ ಮನಃಶಾಸ್ತ್ರಜ್ಞರೆ ಇದೇನು ಹೇಳಿ ? ? ? ?



ಪ್ರಪಂಚಕ್ಕೆ ಚಿನ್ನ ಕೊಡುವ ಕೋಲಾರ ಅನ್ನಕ್ಕಾಗಿ ಹಲ್ಲು ಗಿಂಜುವಂತಹದು. ಮೂರುನಾಲ್ಕು ವರ್ಷಕ್ಕೆ ಮಳೆ ಬೀಳುವ, ಬರಗಾಲಕ್ಕೆ ತುತ್ತಾಗುವ ಬಂಗಾರದ ಬೀಡು. ನಾನು ಎರಡು ವರ್ಷದ ಹಿಂದೆ ಕೋಲಾರದಲ್ಲಿ ಮೂರನೇ ಬಿ.ಎ. ಓದುತ್ತಿದ್ದೆ. ಕೋಲಾರದಲ್ಲಿ ದಲಿತರಿಗೆ ಹಾಸ್ಟಲ್‌ಗಳು ಇದುವರೆವಿಗೂ ಕಟ್ಟಲಾಗಿಲ್ಲ. ಇವರು ಓದುವುದು ಒಂದು ಕಡೆ, ಊಟ ಮಾಡುವುದು ಮತ್ತೊಂದು ಕಡೆ, ರೂಮು ಮಾಡಿರುವುದು ಮಗದೊಂದು ಕಡೆ ಆಗಿರುತ್ತದೆ.

ಮಹದೀನ ಮಂಜಿಲ್ ಒಂದು ಹಾಸ್ಟಲ್. ಅಲ್ಲಿ ನಾನು ರೂಮು ಪಡೆದು ಕೊನೆಯ ವರ್ಷದ ಬಿ.ಎ. ವ್ಯಾಸಂಗ ಮಾಡುತ್ತಿದ್ದೆ. ಅಂದು ಭಾನುವಾರ ಬಹಳ ಹುಡುಗರು ಊರಿನ ಕಡೆ ಹೋಗಿದ್ದರು. ಇನ್ನೂರು ಜನಕ್ಕೆ ಅಂದು ಬಹುಶಃ ನೂರ ಇಪ್ಪತ್ತು ಜನ ಇರಬಹುದು. ನಾನು ನನ್ನ ಮೂರು ಜನ ಗೆಳೆಯರು ಊಟ ಮಾಡಿಕೊಂಡು ಬಂದು ಮುಂಬಾಗಿಲಿನಲ್ಲಿ ಮಾತಾಡುತ್ತಾ ಕುಳಿತಿದ್ದೇವೆ. ನಮ್ಮ ಹಾಸ್ಟಲ್ ಬಾಗಿಲು ಸೀಳಿಕೊಂಡು ಒಬ್ಬ ಅರವತ್ತು ದಾಟಿದ ವ್ಯಕ್ತಿ, ಸಪ್ಪೆ ಮುಖ, ಗುಳಿಬಿದ್ದ ಕಣ್ಣು, ಎದ್ದು ಕಾಣುವ ಮೂಳೆಯ ಶರೀರ ಮತ್ತು ಹರಿದ ಬಟ್ಟೆಗಳ ಹಾಕಿಕೊಂಡು ಆತ ಮಾತಾಡಲು, ಹೆಜ್ಜೆ ಇಡಲು ಕಷ್ಟವಾಗುವ ರೀತಿಯಲ್ಲಿ ಬಾಗಿಲಿಗೆ ಬಂದು "ಊಟ ಮಾಡಿ ಮೂರು ದಿನವಾಯ್ತು, ತಲೆ ತಿರುಗುತ್ತೆ" ಎಂದು ದೈನ್ಯದಿಂದ ಕೇಳುತ್ತ ಊಟ ಏನಾದರೂ ಹಾಕಲೇ ಬೇಕು ಇಲ್ಲದಿದ್ರೆ ನಾನು ಈ ಸ್ಥಳ ಬಿಟ್ಟು ಕದಲೋಲ್ಲ ಎಂದು ಸುಸ್ತಾಗಿ ಅಲ್ಲೇ ಕುಂತುಕೊಂಡ. ನಾನು ಮತ್ತು ಗೆಳೆಯರು ಅಡುಗೆಯವರಿಗೆ ಹೇಳಿಕಳುಹಿಸಿದೆವು. ಅಡುಗೆಯವರು ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಊಟ ತರಲಿದ್ದರು.

ಅಷ್ಟು ಹೊತ್ತಿಗೆ ನಾನು ಮತ್ತು ನನ್ನ ಗೆಳೆಯರು "ಏನಪ್ಪಾ, ಇದು ಹೊಲೇರ ಮಾದಿಗರ ಹಾಸ್ಟಲ್ ಊಟ, ತಿಂತೀಯತಾನೆ?" ಎಂದೆ. ಹಸಿವೆಗೆ ನರಳುತ್ತಿದ್ದ ಆತನಿಗೆ ಪ್ರಾಣ ಬಂದಂತಾಯಿತು. ನಮ್ಮ ಮಾತುಗಳು ಆತನಿಗೆ ಭರ್ಜಿಯಿಂದ ಚುಚ್ಚಿದಂತಾಯ್ತು. ಮೇಲೆ ಎದ್ದು ಮೈಲಿಗೆಯಾದವನಂತೆ ಮೈಯ್ಯನ್ನು ಚಡಪಡಿಸಿಕೊಂಡ. "ಹೊಲೇರ ಹಾಸ್ಟಲೇ ಇದು ಥೂ ! ಊಟ ಬೇಡ/ನೀರೂ ಬೇಡ" ಎಂದು ಬಡಬಡನೆ ಮಾತುಗಳ ಕಕ್ಕುತ್ತ ನಡೆಯಲಾರದವನು ಹಿಂದೆ ನೋಡದೆ ಕ್ಷಣ ಮಾತ್ರದಲ್ಲಿ ಅಲ್ಲಿಂದ ಕಂಬಿಕಿತ್ತ. ನಾವು ಈ ಒಂದು ಚಿತ್ರವನ್ನು ಮೂಕರಾಗಿನೋಡತೊಡಗಿದೆವು.

● ರಾಮಕೃಷ್ಣ ಕೋಲಾರ



ಮೈಸೂರಿನ ಕೃಷ್ಣಮೂರ್ತಿಪುರಂನಲ್ಲಿರುವ ವನಿತಾಸದನದಲ್ಲಿ ನನ್ನ ಮಗಳ ವಿವಾಹ ನಡೆಯಿತು. ಗಂಡಸರ ಪಂಕ್ತಿ ಮುಗಿದು ಹೆಂಗಸರ ಪಂಕ್ತಿ ಭೋಜನಕ್ಕೆ ಕುಳಿತಿತ್ತು. ಆ ಪಂಕ್ತಿಯ ಮಧ್ಯದಲ್ಲಿ ಚಿಂದಿ ಬಟ್ಟೆಯುಟ್ಟ ದಟ್ಟ ದರಿದ್ರ ಸ್ತ್ರೀಯೊಬ್ಬಳು ಊಟಕ್ಕೆಕುಳಿತ್ತಿದ್ದಳು. ಅವಳನ್ನು ಕಂಡಾಗ ನನಗೆ ಅಸಹ್ಯವೆನಿಸಿತಾದರೂ ಬಡತನ ಮತ್ತು ಮೇಲು ವರ್ಗದವರ ಹೀನಾಯದ ವರ್ತನೆಗಳಿಂದ ಕಡು ನೊಂದಿದ್ದ ನನ್ನ ಹೃದಯದಲ್ಲಿ ಆ ದರಿದ್ರಳ ಬಗ್ಗೆ ಕನಿಕರ ಮೂಡಿತು. ಪಾಪ ಊಟಮಾಡಿಕೊಂಡು ಹೋಗಲಿ, ಒಬ್ಬ ಭಿಕ್ಷುಕಿಯನ್ನೂ ಅನಾದರ ಮಾಡದೆ ಸಹಪಂಕ್ತಿಯಲ್ಲಿ ಭೋಜನ ನೀಡುವ ಮಾನವೀಯತೆಗಾಗಿ ನಾನು ತಟಸ್ತನಾದೆ.

ಆದರೆ ಆ ಭಿಕ್ಷುಕಿ ಸುಮ್ಮನಿರದೆ ತನ್ನಅಕ್ಕ ಪಕ್ಕದಲ್ಲಿ ಕುಳಿತಿದ್ದ ಸ್ತ್ರೀಯರನ್ನು ಸ್ವಲ್ಪ ದೂರ ಕುಳಿತುಕೊಳ್ಳಿ ಸ್ವಲ್ಪ ದೂರ ಕುಳಿತುಕೊಳ್ಳಿ ಎಂದು ಒತ್ತಾಯ ಮಾಡುತ್ತಿದ್ದಳು. ಸಾಕಷ್ಟು ನಾಗರೀಕರಾದ ಆ ಸ್ತ್ರೀಯರೆಲ್ಲಾ ಮೊದಲೇ ಇವಳ ರೂಪಕ್ಕೆ ಹೇಸಿ ಸಾಕಷ್ಟು ದೂರ ಕುಳಿತಿದ್ದರು. ಇವಳ ಒತ್ತಾಯವನ್ನು ತಾಳಲಾರದೆ ಅವರಲ್ಲೊಬ್ಬರು ನಾವ್ಯಾಕೆ ದೂರ ಕುಳಿತುಕೊಳ್ಳಬೇಕೆಂದು ಪ್ರಶ್ನೆ ಮಾಡಿದರು. "ನಾನು ಬ್ರಾಹ್ಮಣ್ರವ್ವ, ನೀವು ಹೊಲೇರಲ್ವಾ?" ಎಂದಳಾಕೆ. "ನೀನು ಬ್ರಾಹ್ಮಣ್ರವ್ವಾದ್ರೆ ಇಲ್ಲಿಗ್ಯಾಕೆ ಬಂದೆ ಊಟಕ್ಕೆ?" ಎಂದು ಅವರು ಗದರಿಸಿದರು. "ಇಲ್ಲಿ ಅಡಿಗೆ ಮಾಡುತ್ತಿರುವವರು ಬ್ರಾಹ್ಮಣ್ರು ಅಂತ ಗೋತ್ತಾಯ್ತು ಅದಕ್ಕೆ ಬಂದೆ" ಎನ್ನಬೇಕೆ?

ಎರಡುಬಿಗ್ದು, ಕತ್‌ಹಿಡ್ದು ಆಚೆಗೆ ನೂಕಬೇಕೆಂದು ಸಿಟ್ಟು ಬಂತು ನನಗೆ. ಆದರೆ ಮೇಲು ವರ್ಗದವರ ಇಂಥ ನೂರಾರು ದೌರ್ಜನ್ಯಗಳನ್ನು ಕಂಡು ಕೇಳಿ ಹೇಸಿದ್ದ ನಾನು ಸಮಾಧಾನ ಹೇಳಿ ಸುಮ್ಮನಿರಿಸಿದೆ. ಆಕೆ ತೃಪ್ತಿಯಾಗಿ ಊಟಮಾಡಿ ಹೋದನಂತರ ನನ್ನ ಮನಸ್ಸಿಗೆ ಘಾಯವಾಗಿತ್ತು.

● ಎಂ. ಮರಿಸ್ವಾಮಿ ತುಮಕೂರು

## ಛಿ! ಥೂ! ................ ಬೆಂಕಿಹಾಕ!

ಸೆರ್ಕೊಂಡೆ. ಹಾಸ್ಟೆಲ್ ಜೀವನ ಬೇರೆ ಹೊಸದು. ಸಧ್ಯ ದೊಡ್ಡ ಕಾಲೇಜಿನಲ್ಲಿ ಜಾತಿ ಗೀತಿ ಇಲ್ಲ ಅಂತ ಅನ್ಕೊಂಡೆ. ಆದರೆ ಸ್ವಲ್ಪ ದಿನಕ್ಕೆ ಗೊತ್ತಾಯ್ತು, ನಮ್ಮೂರ್‌ಗಿಂತ ಇಲ್ಲೇ ಜಾಸ್ತಿ ಅಂತ. ಹಾಸ್ಟೆಲ್‌ನಲ್ಲಿ, ಕಾಲೇಜಿನಲ್ಲಿ, ಬಾತ್ ರೂಮಿನಲ್ಲಿ ಡೈನಿಂಗ್ ಹಾಲ್‌ನಲ್ಲಿ ನನ್ಜೊತೆ ಮಾತಾಡದೇ ಇಲ್ಲ ಸವರ್ಣೀಯ ವಿದ್ಯಾರ್ಥಿಗಳು. ಕುಡಕಂಡ್ ಬಂದು ಕೂಗಾಡೋರು, ಚಾಕು ತೋರ್ಸವ್ರು. ಎಲೆಕ್ಷನ್‌ಗಂತೂ ನಮ್ಮ ಐಕಳು ನಿಲ್ಲಂಗೆ ಇಲ್ಲ. ಯಾವುದಾದರೂ ಹುಡುಗಿ ಒಳ್ಳೆ ಭಾವನೆಯಿಂದ ನಮ್ಮಲ್ಲಿ ಮಾತನಾಡಿಸಿದರೆ ಸಂಜೆ ಹೊತ್ಗೆ ಡೈನಿಂಗ್ ಹಾಲ್‌ನಲ್ಲಿ ೨೦-೩೦ ಮಂದಿಬಂದು ಚೆನ್ನಾಗಿ ಚೆಚ್ಚಾಕಿ ಬಿಡೋರು.

ಕಾಲೇಜಿನಲ್ಲಿ "ಭಾರತದ ಸಂವಿಧಾನ" ಅನ್ನೊ ಪುಸ್ತಕ ಓದ್ರು ಯಾವ ಮೇಷ್ಟ್ರು ಅಂಬೇಡ್ಕರ್ ಹೇಸರೇಳ್ಳಿಲ್ಲ. ಮನು, ವೇದ, ಭಗವದ್ಗಿತೆ ಹೇಳೋವ್ರು ಯಾಕೆ ಅಂತ ನನಗ್ ನಾನೇ ಯೋಚ್ನೆ ಮಾಡ್ತಿದ್ದೆ. ಎಂ.ಎ.ನೂ ಈಗ ಓದ್ತಾ ಇದ್ದೆನೆ. ಜಾತಿ ಪ್ರಭಾವ ಈ ಹಂತದಲ್ಲಿ ಇನ್ನೂ ಹೆಚ್ಚು.

ಈಗ ನನ್ನನ್ನು ನಾನೇ ತಿಳ್ಕೊತ್ತಾ ಇದ್ದಿನಿ. ಜಾತಿ ಮಾಡಿರೋದು ಯಾರ್‌ಗಾಗಿ? ಧರ್ಮ ಇರೋದು ಯಾರಗಾಗಿ? ಈ ದೇಶದಲ್ಲಿ ಚೆನ್ನಾಗಿ ಬದ್ಕೋರು ಯಾರು? ನಾನೋದಿರೋ ಎಂ.ಎ. ಯಾತಕ್ಕಾಗಿ? ನಮ್ಮ ರಕ್ತನೆಲ್ಲ ಹೀರೋಕೆ ಏನೇನೂ ಪ್ಲಾನ್ ಮಾಡವ್ರೆ? ಗಾಂಧೀ ತಂದ ಸ್ವಾತಂತ್ರ್ಯ ಯಾರಿಗಾಗಿ? "ಭಾರತ ಪುಣ್ಯ ಭೂಮಿ" ಅಂತಾರಲ್ಲ ಸ್ವಾಮಿ, ಥೂ! ಛೀ ! ಈ ಭಾರತಮಾತೆಗಿಷ್ಟು ಬೆಂಕಿ ಹಾಕ! ಅನ್ಕೊತ್ತಿನಿ. ಆ ಕ್ಷಣಕ್ಕೆ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ನನ್ನ ಮನಸ್ಸಿನಲ್ಲಿ ಮಿಂಚಿ ಹೋಗ್ತಾರೆ.

# ಉಳ್ಳವರ ಗಂಟಲಿಗೆ ಮುಳ್ಳಾದ ದಲಿತ ಸಂಘರ್ಷ ಸ…

ಹುಣಸೂರು ತಾಲ್ಲೂಕಿನಲ್ಲಿ ತಮಗೆ ಆಗದವರನ್ನು "ಸಿ. ತಿಮ್ಮನಾಯ್ಕನ ಕೊಲೆ ಮಾಡಿದಂತೆ ಕೊಲೆ ಮಾಡಿಸ್ತಿನಿ" ಅಂಬೋ ಲೋಕ ರೂಡಿ ಮಾತಿದೆ. ಸಿ. ತಿಮ್ಮನಾಯ್ಕ ಎಂಬ ಕೀಳು ಕೋಮಿನಾತ ಧರ್ಮಾಪುರಿ ಪಂಚಾಯ್ತಿಗೆ ಛೇರ್‌ಮೆನ್ ಆದಾಗ ಸಹಿಸದ ಜಾತಸ್ಥರು ಉಪಾಯವಾಗಿ ಆತನನ್ನು ಪಂಚಾಯ್ತಿಗೆ ಕರೆಸಿ ಮಾರ್ಗ ಮಧ್ಯದಲ್ಲಿ ಕೊಲೆಮಾಡಿ ಕತ್ತರಿಸಿದರಂತೆ. ಆ ರೀತಿಯೇ ದಲಿತ ಸಂಘರ್ಷ ಸಮಿತಿ ಸಂಚಾಲಕ ಹರಿಹರಆನಂದಸ್ವಾಮಿಯನ್ನುಕೊಲೆ ಮಾಡಿಸುವುದಾಗಿ ಹೇಳಿಕೊಂಡು ತಿರುಗುತ್ತಿದ್ದ ಸವರ್ಣೀಯ ಕೋಟಿರಾಜ ಎಂಬಾತ ಜೂನ್ 25ರಂದು ಬೆಳಗ್ಗೆ ಹರಿಹರಆನಂದಸ್ವಾಮಿಗೆಸಿಕ್ಕಾಗ 'ಏನ್ ಆನಂದ್ ಚೆನ್ನಾಗಿದ್ದೀಯಾ' ಎಂದು ವ್ಯಂಗ್ಯವಾಗಿ ಮಾತಾಡಿಸಿದಾಗ ಆನಂದಸ್ವಾಮಿ ಅಸಹನೆಗೊಂಡುದಾಗೂ ಇಬ್ಬರಿಗೂ ಮಾತು ಕಟುವಾಗಿ ಮುಂದುವರೆದು ಆನಂದಸ್ವಾಮಿಯು ಕೋಟಿರಾಜನಿಗೆ 'ಎಕ್ಕಡದಲ್ಲಿ ಹೊಡೆಯುತ್ತೀನೆ' ಎಂದದು ಅಲ್ಲಿಗೆ ಮುಕ್ತಾಯವಾಗಲಿಲ್ಲ, ಅವರಿಬ್ಬರ ನಡುವೆಯೇ ವೈಯುಕ್ತಿಕವಾಗೂ ಉಳಿಯಲಿಲ್ಲ.

ಯಾಕೆಂದರೆ ಅನೇಕ ವರ್ಷಗಳ ಕಗ್ಗಂಟು ರತ್ನಪುರಿಯನ್ನು ಗೋಜಲನ್ನಾಗಿ ಮಾಡಿತ್ತು. ಹುಣಸೂರು ತಾಲ್ಲೋಕಿನಲ್ಲಿ ದಲಿತ ಸಂಘರ್ಷ ಸಮಿತಿಯು ಹುಟ್ಟಿಕೊಂಡಾಗ ಉಳ್ಳವರ ಗಂಟಲಿಗೆ ಮುಳ್ಳೆಟ್ಟಿಕೊಂಡಂತಾಯಿತು. ಅದುವರೆಗೂ ಹರಿಜನಗಿರಿಜನರನ್ನು ಇಟ್ಟಾಡಿಸುತ್ತಿದ್ದವರಿಗೆ, ಬಿಟ್ಟಿಕೆಲಸಮಾಡಿಸಿಕೊಳ್ಳುತ್ತಿದ್ದವರಿಗೆ,ಮಾತೆತ್ತಿದರೆ ಹೊಲೆಮಾದಿಗ ಅನ್ನುತ್ತಿದ್ದವರಿಗೆ ತಡೆಬಂತು. ಕಾಡು ಕುರುಬರಿಗೆ ಕಡಲೆಪುರಿ ತಿನ್ನಿಸಿ, ಅವರ ಭೂಮಿ ಬರೆಸಿಕೊಳ್ಳುತ್ತಿದ್ದವರಿಗೂ ದಲಿತ ಸಂಘರ್ಷಸಮಿತಿ ಸಿಡಿಲಾಯಿತು. ಉಳ್ಳವರ ನೇರಕ್ಕೆ ನಡೆಯುತ್ತಿದ್ದ ಪೋಲಿಸ್, ರೇವಿನ್ಯೂ ಅಧಿಕಾರಿಗಳ ವಿರುದ್ಧವಾಗೂ ದಲಿತಸಂಘರ್ಷ ಸಮಿತಿ ತನ್ನ ದನಿ ಎತ್ತಿತು. ಉದ್ದೂರ್ ಆಸ್ಪತ್ರೆ ಕಾವಲ್ ಸೊಸೈಟಿಯ ಲಕ್ಷಾಂತರ ರೂಪಾಯಿ ಅವ್ಯವಹಾರವನ್ನು ದಲಿತ ಸಂಘರ್ಷಸಮಿತಿ ಬಹಿರಂಗಗೊಳಿಸಿದಾಗ ಅದು ಆ ಸುತ್ತಲಿನ ಬಲಾಡ್ಯರನ್ನೆಲ್ಲ ಅಲ್ಲಾಡಿಸಿತು. ಎಲ್ಲಾ ಜಾತಿಯ ಬೀದಿ ಮಕ್ಕಳಿಗೆ ಅನ್ನ–ವಿದ್ಯೆ ನೀಡುತ್ತಿದ್ದ ವಿಶ್ವಶಾಂತಿ ಸಮಿತಿ ಭೂ ವಿವಾದದಲ್ಲಿ ವಿಶ್ವಶಾಂತಿ ಸಮಿತಿ ಪರವಾಗಿ ದಲಿತ ಸಂಘರ್ಷ ಸಮಿತಿ ನಿಂತಿದ್ದು ಇನ್ನಷ್ಟು ವಿರೋಧಿಗಳನ್ನು ಹುಟ್ಟುಹಾಕಿಕೊಂಡಿತು. ಒಟ್ಟನಲ್ಲಿ ಎಲ್ಲಾ ಅನ್ಯಾಯಕಾರರೂ ಒಟ್ಟಗೆಸೇರಿ ದಲಿತ ಸಂಘರ್ಷ ಸಮಿತಿ ಮಟ್ಟ ಹಾಕಲು ಯಾವುದಾದರು ನೆಪಕ್ಕಾಗಿ ಕಾಲ ಎಣಿಸುತ್ತಿದ್ದರು. ಅಂಥಕಾಲ ಅವರಿಗೆ ಒದಗಿ ಬಂತು ಆದಕ್ಕಾಗೇ ಕೋಟಿರಾಜ, ಹರಿಹರ ಆನಂದಸ್ವಾಮಿ ನಡುವಿನ ಮಾತು ಪಂಚಾಯ್ತಿಗೆ ಬಂತು.

**ಹುಣಸೂರು ತಾಲ್ಲೂಕಿನಲ್ಲಿ ದಲಿತ ಸಂಘರ್ಷ ಸಮಿತಿಯು ಹುಟ್ಟಿಕೊಂಡಾ…
ವರ ಗಂಟಲಿಗೆ ಮುಳ್ಳೆಟ್ಟಿಕೊಂಡಂತಾಯಿತು. ಉಳ್ಳವರ ನೇರಕ್ಕೆನಡೆಯುತ್ತಿದ್ದ ಪೋ…
ರೆವಿನ್ಯೂ ಅಧಿಕಾರಿಗಳ ವಿರುದ್ಧವೂ ದಲಿತ ಸಂಘರ್ಷ ಸಮಿತಿ ದನಿ ಎತ್ತಿತು. …
ನಲ್ಲಿ ಎಲ್ಲಾ ಅನ್ಯಾಯಕಾರರೂ ಒಟ್ಟಗೆ ಸೇರಿ ದಲಿತ ಸಂಘರ್ಷ ಸಮಿತಿ ಮಟ್ಟಹ…
ಯಾವುದಾದರು ನೆಪಕ್ಕಾಗಿ ಕಾಯುತ್ತಿದ್ದರು.**

೨೫ರಂದು ಸಂಜೆಯೇ ರತ್ನಪುರಿ ಇತಿಹಾಸದಲ್ಲೆ ಮೊದಲ ಬಾರಿಯಾಗಿ ಹರಿಜನರ ಕೇರಿಯಲ್ಲಿ ಟಾಂಟಾಂ ಹೊಡೆಸಿ ಪಂಚಾಯಿತ್ತಿಸೇರಿತು, ಹರಿಜನ ಯಜಮಾನರುಗಳಿಗೆ ಸವರ್ಣೀಯಯಜಮಾನರು ಮೊದಲು ಕೇಳಿದ್ದು "ಎಕ್ಕಡ ತಕ್ಕಳ್ತಿನಿ ಅಂದ್ನಲ್ಲ, ಎಲ್ಲಾ ಅವ್ನ? ಮೊದ್ಲು ಅವ್ನ ಬರೆಹೇಳಿ" ಎಂದು. ಹರಿಜನ ಯಜಮಾನರು ಅವನಿಗೆ ಹುಷಾರಿಲ್ಲ. ಮುಖ್ಯಸ್ಥರಾಗಿ ನಾವು ಬಂದಿದ್ದೀವಿ. ಅವನ ಆಗುಹೋಗುಗಳಿಗೆ ನಾವು ತಲೆಕೊಡದೆ ಇರಕಾಯ್ತದ"ಎನ್ನಲು,ಸವರ್ಣೀಯ ಯಜಮಾನರು ಮತ್ತೂ ಕುಪಿತರಾಗಿ "ಹೊಲಿಬಡ್ಡೀಮುಕ್‌ಗೆ ಮಾತ್ ಜಾಸ್ತಿಯಾಯ್ತು ಕನ್ರಲೊ.ಈ ಸರ್ತಿ ಇವರ್ನ ಹಿಂಗೆ ಬಿಡಬಾರ್ದು"ಎನ್ನಲು 'ನೀವ್ ಸತ್ಯವಂತ್ರ, ನೀವ್‌ಸತ್ಯವಂತ್ರ' ಎಂದು ಎರಡೂ, ಕಡೆಗಳಿಂದ ಮಾತೆದ್ದು ಕಲಸಿಕೊಂಡು ನಾಗೋಜಿ ಎಂಬ ಸವರ್ಣೀಯ ಯಜಮಾನನು ಹರಿಜನಯಜಮಾನ ನರಸಿಂಹಯ್ಯನವರಿಗೆ ಕತ್ತಿನ ಮೇಲೆ ಹೊಡೆದು ಕೆಳಕ್ಕೆ ಕುಕ್ಕರಿಸಿದನು.

ಈ ನಡುವೆ ಒಂದು ಸವರ್ಣೀಯ ಪುಂಡು ಗುಂಪು ಸ್ಕೂಲಿನ ಹಿಂದುಗಡೆ ಮರದ ಕೊಂಬೆಗಳನ್ನು ಮುರಿಯುತ್ತಿದ್ದುದರ ಸುಳಿವು ಸಿಕ್ಕಿ ಹರಿಜನ ಯಜಮಾನರು 'ಇಲ್ಲಿ ನ್ಯಾಯಮಾತಾಡೋರು ಯಾರು ಇಲ್ಲ'ಎಂದು ಹೇಳಿ ಪಂಚಾಯ್ತಿಯಿಂದ ಎದ್ದು ಸ್ವಲ್ಪ ಓಡುತ್ತಲೇ ತಮ್ಮಕೇರಿಗೆ ಬಂದು ಬಿಟ್ಟರು. ಆ ಕಡೆ ಸವರ್ಣೀಯರ ಪುಂಡು ಗುಂಪು ಹೊಡೆಯಲು ರೆಡಿಯಾಗಿ ಕೊಂಬೆಗಳೊಡನೆ ಕಾಕು ಸಿಳ್ಳಿಹಾಕ್ಕೊಂಡು ಬಂದು ಯಜಮಾನರು ಸಿಕ್ಕದ್ದಕ್ಕೆ ನಿರಾಶರಾಗಿ ಕೇರಿಗೆ ನುಗ್ಗಿದಾಗ ಹರಿಜನರ ಹುಡುಗರೂ ಗುಂಪಾಗಿ ತಡೆದು ತಳ್ಳಾಟನಡೆಯಿತು.

ಮೇಲಿನಂತೆ ಪರಿಸ್ಥಿತಿ ಬಿಗಾಡಾಯಿಸ…
ಕಂಡು ಹರಿಹರ ಆನಂದಸ್ವಾಮಿ ಮತ್ತು…
ಸ್ವಾಮಿಯವರು ಡ್ರೈವ್ ವ್ಯಾನಿನಲ್ಲಿ ಹು…
ಸೂರು ಪೋಲಿಸ್ ಸ್ಟೇಷನ್ನಿಗೆ ಹ…
ಸವರ್ಣೀಯ ಗುಂಪು ಆ ವ್ಯಾನನ್ನು ಸು…
'ಹೊಲೆ ನನ್ಮಗ ಮರಾಜನಂಗೆ ಹೋಯ್ತ…
ಕಾರ್‌ನ ಮೇಲೆ, ಎಳಕಳ್ರಾಲಾ, ತೆಗೆದಾ…
ಯಾರ್ ಏನು ಮಾಡ್ತರೆನೋಡ್ಕುಳುವಾ…
ವ್ಯಾನಲ್ಲಿದ್ದ ಹರಿಹರ ಆನಂದಸ್ವಾಮಿ…
ಸ್ವಾಮಿನಾಯ್ಕರ್‌ನ್ನು ಎಳೆದಾಕುವಷ್ಟರ…
ಜನ ಹುಡುಗರ ಗುಂಪು ಕವರ್ ಆಗಿ…
ಆನಂದಸ್ವಾಮಿ ರಾಮಸ್ವಾಮಿನಾಯ್ಕ…
ಬಚಾವುಮಾಡಿತು. ಅದೇ ವ್ಯಾನು ಹತ್ತಿ…
ಸವರ್ಣೀಯರು ಹುಣಸೂರಿಗೆ ಹೋಗಿ…
ಪೋಲಿಸರೊಡನೆ ಬಂದರು. ಅಷ್ಟಕ್ಕೇ…
ಎಲ್ಲರೂ ತಂತಮ್ಮ ಮನೆಗೆ ಹೋದರು…
ಆದಿನವು ೨೫ನೇ ತಾರೀಖಿನ ಕೊಲೆ…
ಮುನ್ನುಡಿ ಬರೆದು ನಡಿದಿತ್ತು.

ಆ ೨೫ನೇ ತಾರೀಖು ಕಳೆದು ಬೆ…
ಸವರ್ಣೀಯ ಮುಖಂಡರು ಹಣವಂತರ…
ವೆತ್ತಿ ಹರಿಜನರ ಮಟ್ಟಹಾಕಲು ಸುತ್ತಲ…
ವರು ಸೇರುವ ಸಂತೇ ದಿನವನ್ನುಆಯ್ಕು…
ಅಂದು ನಡೆಯ ಬಹುದಾದ ಗಲಾಟೆಗೆ…
ಸರು ಊರಿಗೆ ಕಾಲಿಡದಿರಲು ದುಡ್ಡು ಸ…
ಈ ಕಡೆ ಹರಿಜನ ಯಜಮಾನರು ಹು…
ಪೋಲಿಸ್ ಸಬ್ ಇನ್ಸಪೆಕ್ಟರ್ ಗಂಗರಾ…
ಕಂಡು ಹಿಂಗಿಂಗೆಸ್ವಾಮಿ ಅಂದಾಗ ಆತ…
ನೀವು ರತ್ನಪುರಿಯವರಾ ? ನಿಮ್ಮ ಹೊ…
ಏನ್ ಮಾಡೋದು ನಾವು ? ನೀವ…
ಬಿಟ್ಟೋಗಿ ಎಲ್ಲಾ ಸರಿಯಾಗ್ತದೆ'ಎನ್ನಿಸಿ…
ಊರಿಗೆ ಬಂದು ಎಲ್ಲರನ್ನೂ ಸೇರಿಸಿ…
ಪೋಲಿಸ್ನೋರು ಹಿಂಗಂತವರೇ ! ಈ…
ದಲ್ಲಿ ನಾವು ಯಾವ ಥರ ಇರೋದು ?…
ವ್ಯವಸ್ಥೆ ಏನಾದ್ರೂ ಮಾಡುವ' ಅಂದ್ರು…
ಸಬ್ ಇನ್ಸ್‌ಪೆಕ್ಟರ್ ಅಂದುದನ್ನೆಲ್ಲ ಸೇರಿ…
ನ ಪರಿಸ್ಥಿತಿಯನ್ನು ವಿವರಿಸಿ ಪೋಲಿಸ್…

# ಹೇಳಿ, ಹೇಳಿ ಮನಃಶಾಸ್ತ್ರಜ್ಞರೆ ಇದೇನು ಹೇಳಿ ? ? ? ?

## ೧

ಪ್ರಪಂಚಕ್ಕೆ ಚಿನ್ನ ಕೊಡುವ ಕೋಲಾರ ಅನ್ನಕ್ಕಾಗಿ ಹಲ್ಲು ಗಿಂಜುವಂತಹದು. ಮೂರುನಾಲ್ಕು ವರ್ಷಕ್ಕೆ ಮಳೆ ಬೀಳುವ, ಬರಗಾಲಕ್ಕೆ ತುತ್ತಾಗುವ ಬಂಗಾರದ ಬೀಡು. ನಾನು ಎರಡು ವರ್ಷದ ಹಿಂದೆ ಕೋಲಾರದಲ್ಲಿ ಮೂರನೇ ಬಿ.ಎ. ಓದುತ್ತಿದ್ದೆ. ಕೋಲಾರದಲ್ಲಿ ದಲಿತರಿಗೆ ಹಾಸ್ಟಲ್‌ಗಳು ಇದುವರೆವಿಗೂ ಕಟ್ಟಲಾಗಿಲ್ಲ. ಇವರು ಓದುವುದು ಒಂದು ಕಡೆ, ಊಟ ಮಾಡುವುದು ಮತ್ತೊಂದು ಕಡೆ, ರೂಮು ಮಾಡಿರುವುದು ಮಗದೊಂದು ಕಡೆ ಆಗಿರುತ್ತದೆ.

ಮದೀನ ಮಂಜಿಲ್ ಒಂದು ಹಾಸ್ಟಲ್.ಅಲ್ಲಿ ನಾನು ರೂಮು ಪಡೆದು ಕೊನೆಯ ವರ್ಷದ ಬಿ.ಎ. ವ್ಯಾಸಂಗ ಮಾಡುತ್ತಿದ್ದೆ. ಅಂದು ಶನಿವಾರ ಬಹಳ ಹುಡುಗರು ಊರಿನ ಕಡೆ ಹೋಗಿದ್ದರು. ಇನ್ನೂರು ಜನಕ್ಕೆ ಅಂದು ಬಹುಶಃ ನೂರ ಇಪ್ಪತ್ತು ಜನ ಇರಬಹುದು. ನಾನು ನನ್ನ ಮೂರು ಜನ ಗೆಳೆಯರು ಊಟ ಮಾಡಿಕೊಂಡು ಬಂದು ಮುಂಬಾಗಿಲಿನಲ್ಲಿ ಮಾತಾಡುತ್ತಾ ಕುಳಿತಿದ್ದೇವೆ. ನಮ್ಮ ಹಾಸ್ಟಲ್ ಬಾಗಿಲು ಸೀಳಿಕೊಂಡು ಒಬ್ಬ ಅರವತ್ತು ದಾಟಿದ ವ್ಯಕ್ತಿ ಸಪ್ಪೆ ಮುಖ, ಗುಳಿಬಿದ್ದ ಕಣ್ಣು, ಎದ್ದು ಕಾಣುವ ಮೂಳೆಯ ಶರೀರ ಮತ್ತು ಹರಿದ ಬಟ್ಟೆಗಳ ಹಾಕಿಕೊಂಡು ಆತ ಮಾತಾಡಲು, ಹೆಜ್ಜೆ ಇಡಲು ಕಷ್ಟವಾಗುವ ರೀತಿಯಲ್ಲಿ ಬಾಗಿಲಿಗೆ ಬಂದು "ಊಟ ಮಾಡಿ ಮೂರು ದಿನವಾಯ್ತು, ತಲೆ ತಿರುಗುತ್ತೆ" ಎಂದು ದೈನ್ಯದಿಂದ ಕೇಳುತ್ತ ಊಟ ಏನಾದರೂ ಹಾಕಲೇ ಬೇಕು ಇಲ್ಲದಿದ್ರೆ ನಾನು ಈ ಸ್ಥಳ ಬಿಟ್ಟು ಕದಲೋಲ್ಲ ಎಂದು ಸುಸ್ತಾಗಿ ಅಲ್ಲೇ ಕುಂತುಕೊಂಡ. ನಾನು ಮತ್ತು ಗೆಳೆಯರು ಅಡುಗೆಯವರಿಗೆ ಹೇಳಿಕಳುಹಿಸಿದೆವು. ಅಡುಗೆಯವರು ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಊಟ ತರಲಿದ್ದರು.

ಅಷ್ಟು ಹೊತ್ತಿಗೆ ನಾನು ಮತ್ತು ನನ್ನ ಗೆಳೆಯರು "ಏನಪ್ಪಾ, ಇದು ಹೊಲೇರ ಮಾದಿಗರ ಹಾಸ್ಟಲ್ ಊಟ, ತಿಂತೀಯತಾನೆ?"ಎಂದೆ. ಹಸಿವೆಗೆ ನರಳುತ್ತಿದ್ದ ಆತನಿಗೆ ಪ್ರಾಣ ಬಂದಂತಾಯಿತು. ನಮ್ಮ ಮಾತುಗಳು ಆತನಿಗೆ ಭರ್ಜಿಯಿಂದ ಚುಚ್ಚಿದಂತಾಯ್ತು. ಮೇಲೆ ಎದ್ದು ಮೈಲಿಗೆಯಾದವನಂತೆ ಮೈಯ್ಯನ್ನು ಚಡಪಡಿಸಿಕೊಂಡ. "ಹೊಲೇರ ಹಾಸ್ಟಲೇ ಇದು ಥೂ ! ಊಟ ಬೇಡ ನೀರೂ ಬೇಡ" ಎಂದು ಬಡಬಡನೆ ಮಾತುಗಳ ಕಕ್ಕುತ್ತ ನಡೆಯಲಾರದವನು ಹಿಂದೆ ನೋಡದೆ ಕ್ಷಣ ಮಾತ್ರದಲ್ಲಿ ಅಲ್ಲಿಂದ ಕಂಬಿಕಿತ್ತ. ನಾವು ಈ ಒಂದು ಚಿತ್ರವನ್ನು ಮೂಕರಾಗಿನೋಡತೊಡಗಿದೆವು. ● ರಾಮಕೃಷ್ಣ ಕೋಲಾರ

## ೨

ಮೈಸೂರಿನ ಕೃಷ್ಣಮೂರ್ತಿಪುರಂನಲ್ಲಿರುವ ವನಿತಾಸದನದಲ್ಲಿ ನನ್ನ ಮಗಳ ವಿವಾಹ ನಡೆಯಿತು. ಗಂಡಸರ ಪಂಕ್ತಿ ಮುಗಿದು ಹೆಂಗಸರ ಪಂಕ್ತಿ ಭೋಜನಕ್ಕೆ ಕುಳಿತಿತ್ತು. ಆ ಪಂಕ್ತಿಯ ಮಧ್ಯದಲ್ಲಿ ಚಿಂದಿ ಬಟ್ಟೆಯುಟ್ಟ ದಟ್ಟ ದರಿದ್ರ ಸ್ತ್ರೀಯೊಬ್ಬಳು ಊಟಕ್ಕೆಕುಳಿತ್ತಿದ್ದಳು. ಅವಳನ್ನು ಕಂಡಾಗ ನನಗೆ ಅಸಹ್ಯವೆನಿಸಿತಾದರೂ ಬಡತನ ಮತ್ತು ಮೇಲು ವರ್ಗದವರ ಹೀನಾಯದ ವರ್ತನೆಗಳಿಂದ ಕಡು ನೊಂದಿದ್ದ ನನ್ನ ಹೃದಯದಲ್ಲಿ ಆ ದರಿದ್ರಳ ಬಗ್ಗೆ ಕನಿಕರ ಮೂಡಿತು. ಪಾಪ ಊಟಮಾಡಿಕೊಂಡು ಹೋಗಲಿ, ಒಬ್ಬ ಭಿಕ್ಷುಕಿಯನ್ನೂ ಅನಾದರ ಮಾಡದೆ ಸಹಪಂಕ್ತಿಯಲ್ಲಿ ಭೋಜನ ನೀಡುವ ಮಾನವೀಯತೆಗಾಗಿ ನಾನು ತಟಸ್ಥನಾದೆ.

ಆದರೆ ಆ ಭಿಕ್ಷುಕಿ ಸುಮ್ಮನಿರದೆ ತನ್ನಅಕ್ಕಪಕ್ಕದಲ್ಲಿ ಕುಳಿತಿದ್ದ ಸ್ತ್ರೀಯರನ್ನು ಸ್ವಲ್ಪ ದೂರ ಕುಳಿತುಕೊಳ್ಳಿ ಸ್ವಲ್ಪ ದೂರ ಕುಳಿತುಕೊಳ್ಳಿ ಎಂದು ಒತ್ತಾಯ ಮಾಡುತ್ತಿದ್ದಳು. ಸಾಕಷ್ಟು ನಾಗರೀಕರಾದ ಆ ಸ್ತ್ರೀಯರೆಲ್ಲಾ ಮೊದಲೇ ಇವಳ ರೂಪಕ್ಕೆ ಹೇಸಿ ಸಾಕಷ್ಟು ದೂರ ಕುಳಿತಿದ್ದರು. ಇವಳ ಒತ್ತಾಯವನ್ನು ತಾಳಲಾರದೆ ಅವರಲ್ಲೊಬ್ಬರು ನಾವ್ಯಾಕೆ ದೂರ ಕುಳಿತುಕೊಳ್ಳಬೇಕೆಂದು ಪ್ರಶ್ನೆ ಮಾಡಿದರು. "ನಾನು ಬ್ರಾಹ್ಮಣ್ರುವ್ಳು, ನೀವು ಹೊಲೇರಲ್ವಾ?" ಎಂದಳಾಕೆ. "ನೀನು ಬ್ರಾಹ್ಮಣ್ರುವ್ಳಾದ್ರೆ ಇಲ್ಲಿಗ್ಯಾಕೆ ಬಂದೆ ಊಟಕ್ಕೆ?" ಎಂದು ಅವರು ಗದರಿಸಿದರು. "ಇಲ್ಲಿ ಅಡಿಗೆ ಮಾಡುತ್ತಿರುವವರು ಬ್ರಾಹ್ಮಣ್ರು ಅಂತ ಗೊತ್ತಾಯ್ತು ಅದಕ್ಕೆ ಬಂದೆ"ಎನ್ನಬೇಕೆ? ಎರಡುಬಿಗ್ದು, ಕತ್‌ಹಿಡ್ದು ಆಚೆಗೆ ನೂಕಬೇಕೆಂದು ಸಿಟ್ಟು ಬಂತು ನನಗೆ. ಆದರೆ ಮೇಲು ವರ್ಗದವರ ಇಂಥ ನೂರಾರು ದೌರ್ಜನ್ಯಗಳನ್ನು ಕಂಡು ಕೇಳಿ ಹೇಸಿದ್ದ ನಾನು ಸಮಾಧಾನ ಹೇಳಿ ಸುಮ್ಮನಿರಿಸಿದೆ. ಆಕೆ ತೃಪ್ತಿಯಾಗಿ ಊಟಮಾಡಿ ಹೋದನಂತರ ನನ್ನ ಮನಸ್ಸಿಗೆ ಘಾಯವಾಗಿತ್ತು.

● ಎಂ. ಮರಿಸ್ವಾಮಿ ತುಮಕೂರು

## ...ಿ! ಥೂ!................ಬೆಂಕಿಹಾಕ!

...ರ್ಕೊಂಡೆ. ಹಾಸ್ಟೆಲ್ ಜೀವನ ಬೇರೆ ಹೊಸದು. ...ಷ್ಟ ದೊಡ್ಡ ಕಾಲೇಜಿನಲ್ಲಿ ಜಾತಿ ಗೀತಿ ಇಲ್ಲ ...ಂತ ಅನ್ಕೊಂಡೆ. ಆದರೆ ಸ್ವಲ್ಪ ದಿನಕ್ಕೆ ಗೊತ್ತಾಯ್ತು ನಮ್ಮೂರ್‌ಗಿಂತ ಇಲ್ಲೇ ಜಾಸ್ತಿ ಅಂತ. ಹಾಸ್ಟೆಲ್‌ನಲ್ಲಿ, ಕಾಲೇಜಿನಲ್ಲಿ, ಬಾತ್ ರೂಮಿನಲ್ಲಿ ಮೆಸ್ಸಿಂಗ್ ಹಾಲ್‌ನಲ್ಲಿ ನನ್ನೊತೆ ಮಾತಾಡದೇ ...ಲ್ಲ ಸವರ್ಣೀಯ ವಿದ್ಯಾರ್ಥಿಗಳು. ಕುಡಕಂಡ್ ಬಂದು ಕೂಗಾಡೋರು, ಚಾಕು ತೋರ್ಸವ್ರು. ಸೆಲೆಕ್ಷನ್‌ಗಂತೂ ನಮ್ಮ ಐಕಳು ನಿಲ್ಲಂಗೆ ಇಲ್ಲ. ಯಾವುದಾದರೂ ಹುಡುಗಿ ಒಳ್ಳೆ ಭಾವನೆಯಿಂದ ನಮ್ಮಲ್ಲಿ ಮಾತನಾಡಿಸಿದರೆ ಸಂಜೆ ಹೊತ್ಗೆ ಡೈನಿಂಗ್ ಹಾಲ್‌ನಲ್ಲಿ ೨೦-೩೦ ಮಂದಿಬಂದು ಚೆನ್ನಾಗಿ ಚಚ್ಚಾಕಿ ಬಿಡೋರು.

ಕಾಲೇಜಿನಲ್ಲಿ "ಭಾರತದ ಸಂವಿಧಾನ" ಅನ್ನೊ ಪುಸ್ತಕ ಓದ್ರು ಯಾವ ಮೇಷ್ಟ್ರು ಅಂಬೇಡ್ಕರ್ ಹೇಸರೇಳ್ಲಿಲ್ಲ. ಮನು, ವೇದ, ಭಗವದ್ಗಿತೆ ಹೇಳೋವ್ರು ಯಾಕೆ ಅಂತ ನನಗ್ ನಾನೇ ಯೋಚ್ನೆ ಮಾಡ್ತಿದ್ದೆ. ಎಂ.ಎ. ನೂ ಈಗ ಓದ್ತಾ ಇದ್ದೆನೆ. ಜಾತಿ ಪ್ರಭಾವ ಈ ಹಂತದಲ್ಲಿ ಇನ್ನೂ ಹೆಚ್ಚು.

ಈಗ ನನ್ನನ್ನು ನಾನೇ ತಿಳ್ಕೊತ್ತಾ ಇದ್ದಿನಿ. ಜಾತಿ ಮಾಡಿರೋದು ಯಾರ್‌ಗಾಗಿ? ಧರ್ಮ ಇರೋದು ಯಾರಗಾಗಿ? ಈ ದೇಶದಲ್ಲಿ ಚೆನ್ನಾಗಿ ಬದ್ಕೋರು ಯಾರು? ನಾನೋದಿರೋ ಎಂ.ಎ. ಯಾತಕ್ಕಾಗಿ? ನಮ್ಮ ರಕ್ತನೆಲ್ಲ ಹೀರೋಕೆ ಏನೇನೂ ಪ್ಲಾನ್ ಮಾಡವ್ರೆ? ಗಾಂಧೀ ತಂದ ಸ್ವಾತಂತ್ರ್ಯ ಯಾರಿಗಾಗಿ? "ಭಾರತ ಪುಣ್ಯ ಭೂಮಿ" ಅಂತಾರಲ್ಲ ಸ್ವಾಮಿ, ಥೂ! ಛೀ ! ಈ ಭಾರತಮಾತೆಗಿಷ್ಟು ಬೆಂಕಿ ಹಾಕ! ಅನ್ಕೊತ್ತಿನಿ. ಆ ಕ್ಷಣಕ್ಕೆ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ನನ್ನ ಮನಸ್ಸಿನಲ್ಲಿ ಮಿಂಚಿ ಹೋಗ್ತಾರೆ.

# ಉಳ್ಳವರ ಗಂಟಲಿಗೆ ಮುಳ್ಳಾದ ದಲಿತ ಸಂಘರ್ಷ ಸ

ಹುಣಸೂರು ತಾಲ್ಲೂಕಿನಲ್ಲಿ ತಮಗೆ ಆಗದವರನ್ನು "ಸಿ. ತಿಮ್ಮನಾಯ್ಕನ ಕೊಲೆ ಮಾಡಿದಂತೆ ಕೊಲೆ ಮಾಡಿಸ್ತಿನಿ" ಅಂಬೊ ಲೋಕ ರೂಢಿ ಮಾತಿದೆ. ಸಿ. ತಿಮ್ಮನಾಯ್ಕ ಎಂಬ ಕೀಳು ಕೋಮಿನಾತ ಧರ್ಮಪುರಿ ಪಂಚಾಯ್ತಿಗೆ ಛೇರ್ ಮೆನ್ ಆದಾಗ ಸಹಿಸದ ಜಾತಸ್ಥರು ಉಪಾಯವಾಗಿ ಆತನನ್ನು ಪಂಚಾಯ್ತಿಗೆ ಕರೆಸಿ ಮಾರ್ಗ ಮಧ್ಯದಲ್ಲಿ ಕೊಲೆಮಾಡಿ ಕತ್ತರಿಸಿದರಂತೆ. ಆ ರೀತಿಯೇ ದಲಿತ ಸಂಘರ್ಷ ಸಮಿತಿ ಸಂಚಾಲಕ ಹರಿಹರಆನಂದಸ್ವಾಮಿಯನ್ನುಕೊಲೆ ಮಾಡಿಸುವುದಾಗಿ ಹೇಳಿಕೊಂಡು ತಿರುಗುತ್ತಿದ್ದ ಸವರ್ಣೀಯ ಕೋಟೆರಾಜ ಎಂಬಾತ ಜೂನ್ 25ರಂದು ಬೆಳಗ್ಗೆ ಹರಿಹರಆನಂದಸ್ವಾಮಿಗೆಸಿಕ್ಕಾಗ 'ಏನ್ ಆನಂದ್ ಚೆನ್ನಾಗಿದ್ದೀಯಾ' ಎಂದು ವ್ಯಂಗ್ಯವಾಗಿ ಮಾತಾಡಿಸಿದಾಗ ಆನಂದಸ್ವಾಮಿ ಅಸಹನೆಗೊಂಡುದಾಗೂ ಇಬ್ಬರಿಗೂ ಮಾತು ಕಟುವಾಗಿ ಮುಂದುವರೆದು ಆನಂದಸ್ವಾಮಿಯು ಕೋಟೆರಾಜನಿಗೆ 'ಎಕ್ಕಡದಲ್ಲಿ ಹೊಡೆಯುತ್ತೇನೆ' ಎಂದದು ಅಲ್ಲಿಗೆ ಮುಕ್ತಾಯವಾಗಲಿಲ್ಲ, ಅವರಿಬ್ಬರ ನಡುವೆಯೇ ವೈಯುಕ್ತಿಕವಾಗೂ ಉಳಿಯಲಿಲ್ಲ.

ಯಾಕೆಂದರೆ ಅನೇಕ ವರ್ಷಗಳ ಕಗ್ಗಂಟು ರತ್ನಪುರಿಯನ್ನು ಗೋಜಲನ್ನಾಗಿ ಮಾಡಿತ್ತು. ಹುಣಸೂರು ತಾಲ್ಲೋಕಿನಲ್ಲಿ ದಲಿತ ಸಂಘರ್ಷ ಸಮಿತಿಯು ಹುಟ್ಟಿಕೊಂಡಾಗ ಉಳ್ಳವರ ಗಂಟಲಿಗೆ ಮುಳ್ಳಿಟ್ಟಕೊಂಡಂತಾಯಿತು. ಅದುವರೆಗೂ ಹರಿಜನಗಿರಿಜನರನ್ನು ಇಟ್ಕಾಡಿಸುತ್ತಿದ್ದವರಿಗೆ, ಬಿಟ್ಟಿಕೆಲಸಮಾಡಿಸಿಕೊಳ್ಳುತ್ತಿದ್ದವರಿಗೆ,ಮಾತೆತ್ತಿದರೆ ಹೊಲೆಮಾದಿಗ ಅನ್ನುತ್ತಿದ್ದವರಿಗೆ ತಡೆಬಂತು. ಕಾಡು ಕುರುಬರಿಗೆ ಕಡಲೆಪುರಿ ತಿನ್ನಿಸಿ, ಅವರ ಭೂಮಿ ಬರೆಸಿಕೊಳ್ಳುತ್ತಿದ್ದವರಿಗೂ ದಲಿತ ಸಂಘರ್ಷಸಮಿತಿ ಸಿಡಿಲಾಯಿತು. ಉಳ್ಳವರ ನೇರಕ್ಕೆ ನಡೆಯುತ್ತಿದ್ದ ಪೋಲಿಸ್, ರೇವಿನ್ಯೂ ಅಧಿಕಾರಿಗಳ ವಿರುದ್ಧವಾಗೂ ದಲಿತಸಂಘರ್ಷ ಸಮಿತಿ ತನ್ನ ದನಿ ಎತ್ತಿತು. ಉದ್ಧೂರ್ ಆಸ್ಪತ್ರೆ ಕಾವಲ್ ಸೊಸೈಟಿಯ ಲಕ್ಷಾಂತರ ರೂಪಾಯಿ ಅವ್ಯವಹಾರವನ್ನು ದಲಿತ ಸಂಘರ್ಷಸಮಿತಿ ಬಹಿರಂಗಗೊಳಿಸಿದಾಗ ಅದು ಆ ಸುತ್ತಲಿನ ಬಲಾಢ್ಯರನ್ನೆಲ್ಲ ಅಲ್ಲಾಡಿಸಿತು. ಎಲ್ಲಾ ಜಾತಿಯ ಬೀದಿ ಮಕ್ಕಳಿಗೆ ಅನ್ನ–ವಿದ್ಯೆ ನೀಡುತ್ತಿದ್ದ ವಿಶ್ವಶಾಂತಿ ಸಮಿತಿ ಭೂ ವಿವಾದದಲ್ಲಿ ವಿಶ್ವಶಾಂತಿ ಸಮಿತಿ ಪರವಾಗಿ ದಲಿತ ಸಂಘರ್ಷ ಸಮಿತಿ ನಿಂತಿದ್ದು ಇನ್ನಷ್ಟು ವಿರೋಧಿಗಳನ್ನು ಹುಟ್ಟುಹಾಕಿಕೊಂಡಿತು. ಒಟ್ಟನಲ್ಲಿ ಎಲ್ಲಾ ಅನ್ಯಾಯಕಾರರೂ ಒಟ್ಟಗೆಸೇರಿ ದಲಿತ ಸಂಘರ್ಷ ಸಮಿತಿ ಮಟ್ಟಹಾಕಲು ಯಾವುದಾರು ನೆಪಕ್ಕಾಗಿ ಕಾಲ ಎಣಿಸುತ್ತಿದ್ದರು. ಅಂಥಕಾಲ ಅವರಿಗೆ ಒದಗಿ ಬಂತು ಆದಕ್ಕಾಗೇ ಕೋಟೆರಾಜ, ಹರಿಹರ ಆನಂದ ಸ್ವಾಮಿ ನಡುವಿನ ಮಾತು ಪಂಚಾಯ್ತಿಗೆ ಬಂತು.

ಮೇಲಿನಂತೆ ಪರಿಸ್ಥಿತಿ ಬಿಗಾಡಾಯಿಸ
ಕಂಡು ಹರಿಹರ ಆನಂದಸ್ವಾಮಿ ಮತ್ತ
ಸ್ವಾಮಿಯವರು ಡೈರಿ ವ್ಯಾನಿನಲ್ಲಿ ಕೂ
ಸೂರು ಪೋಲಿಸ್ ಸ್ಟೇಷನ್ನಿಗೆ ಕ
ಸವರ್ಣೀಯ ಗುಂಪು ಆ ವ್ಯಾನನ್ನು ಸ
'ಹೊಲೆ ನನ್ಮಗ ಮರಾಜನಂಗೆ ಹೋಯ

---

**ಹುಣಸೂರು ತಾಲ್ಲೂಕಿನಲ್ಲಿ ದಲಿತ ಸಂಘರ್ಷ ಸಮಿತಿಯು ಹುಟ್ಟಿಕೊಂಡಾ**
**ವರ ಗಂಟಲಿಗೆ ಮುಳ್ಳಿಟ್ಟಕೊಂಡಂತಾಯಿತು. ಉಳ್ಳವರ ನೇರಕ್ಕೆನಡೆಯುತ್ತಿದ್ದ ಪೊ**
**ರೆವಿನ್ಯೂ ಅಧಿಕಾರಿಗಳ ವಿರುದ್ಧವೂ ದಲಿತ ಸಂಘರ್ಷ ಸಮಿತಿ ದನಿ ಎತ್ತಿತು.**
**ನಲ್ಲಿ ಎಲ್ಲಾ ಅನ್ಯಾಯಕಾರರೂ ಒಟ್ಟಿಗೆ ಸೇರಿ ದಲಿತ ಸಂಘರ್ಷ ಸಮಿತಿ ಮಟ್ಟ**
**ಯಾವುದಾದರು ನೆಪಕ್ಕಾಗಿ ಕಾಯುತ್ತಿದ್ದರು.**

---

೨೫ರಂದು ಸಂಜೆಯೇ ರತ್ನಪುರಿ ಇತಿಹಾಸದಲ್ಲೆ ಮೊದಲ ಬಾರಿಯಾಗಿ ಹರಿಜನರ ಕೇರಿಯಲ್ಲಿ ಟಾಂಟಾಂ ಹೊಡೆಸಿ ಪಂಚಾಯಿತ್ತಿಸೇರಿತು, ಹರಿಜನ ಯಜಮಾನರುಗಳಿಗೆ ಸವರ್ಣೀಯಯಜಮಾನರು ಮೊದಲು ಕೇಳಿದ್ದು "ಎಕ್ಕಡ ತಕ್ಕತ್ತಿನಿ ಅಂದ್ನಲ್ಲ, ಎಲ್ಲಾ ಅವ್ನ? ಪೊದ್ಲು ಅವ್ನ ಬರಹೇಳಿ" ಎಂದು. ಹರಿಜನ ಯಜಮಾನರು ಅವನಿಗೆ ಹುಷಾರಿಲ್ಲ. ಮುಖ್ಯಸ್ಥರಾಗಿ ನಾವು ಬಂದಿದ್ದೀವಿ. ಆವನ ಆಗುಹೋಗುಗಳಿಗೆ ನಾವು ತಲೆಕೊಡದೆ ಇರಕಾಯ್ತಾದ"ಎನ್ನಲು,ಸವರ್ಣೀಯ ಯಜಮಾನರು ಮತ್ತೂ ಕುಪಿತರಾಗಿ "ಹೊಲಿ ಬಡ್ಡೀಮಕ್‌ಗೆ ಮಾತ್ ಜಾಸ್ತಿಯಾಯ್ತು ಕನ್ರಲೊ.ಈ ಸರ್ತಿ ಇವರ್ನ ಹಿಂಗೆ ಬಿಡಬಾರ್ದು"ಎನ್ನಲು 'ನೀವ್ ಸತ್ಯವಂತ್ರ, ನೀವ್‌ಸತ್ಯವಂತ್ರ' ಎಂದು ಎರಡೂ, ಕಡೆಗಳಿಂದ ಮಾತೆದ್ದು ಕಲಸಿಕೊಂಡು ನಾಗೋಜಿ ಎಂಬ ಸವರ್ಣೀಯ ಯಜಮಾನನು ಹರಿಜನಯಜಮಾನ ನರಸಿಂಹಯ್ಯನವರಿಗೆ ಕತ್ತಿನ ಮೇಲೆ ಹೊಡೆದು ಕೆಳಕ್ಕೆ ಕುಕ್ಕರಿಸಿದನು.

ಈ ನಡುವೆ ಒಂದು ಸವರ್ಣೀಯ ಪುಂಡು ಗುಂಪು ಸ್ಕೂಲಿನ ಹಿಂದುಗಡೆ ಮರದ ಕೊಂಬೆಗಳನ್ನು ಮುರಿಯುತ್ತಿದ್ದುದರ ಸುಳಿವು ಸಿಕ್ಕಿ ಹರಿಜನ ಯಜಮಾನರು 'ಇಲ್ಲಿ ನ್ಯಾಯಮಾತಾಡೋರು ಯಾರು ಇಲ್ಲ'ಎಂದು ಹೇಳಿ ಪಂಚಾಯ್ತಿಯಿಂದ ಎದ್ದು ಸ್ವಲ್ಪ ಓಡುತ್ತಲೇ ತಮ್ಮಕೇರಿಗೆ ಬಂದು ಬಿಟ್ಟರು. ಆ ಕಡೆ ಸವರ್ಣೀಯರ ಪುಂಡು ಗುಂಪು ಹೊಡೆಯಲು ರೆಡಿಯಾಗಿ ಕೊಂಬೆಗಳೊಡನೆ ಕಾಕು ಸಿಲ್ಪಿಹಾಕ್ಕೊಂಡು ಬಂದು ಯಜಮಾನರು ಸಿಕ್ಕದ್ದಕ್ಕೆ ನಿರಾಶರಾಗಿ ಕೇರಿಗೆ ನುಗ್ಗಿದಾಗ ಹರಿಜನರ ಹುಡುಗರೂ ಗುಂಪಾಗಿ ತಡೆದು ತಳ್ಳಾಟನಡೆಯಿತು.

ಕಾರ್ನ ಮೇಲೆ, ಎಳಕಳ್ರಲಾ, ತೆಗೆದ
ಯಾರ್ ಏನು ಮಾಡ್ತರೆನೋಡ್ಕಳುವ
ವ್ಯಾನಲ್ಲಿದ್ದ ಹರಿಹರ ಆನಂದಸ್ವಾಮಿ
ಸ್ವಾಮಿನಾಯ್ಕರ್‌ನ್ನು ಎಳೆದಾಕುವಷ್ಟ
ಜನ ಹುಡುಗರ ಗುಂಪು ಕವರ್ ಆಗಿ
ಆನಂದಸ್ವಾಮಿ ರಾಮುಸ್ವಾಮಿನಾಯ್ಕ
ಬಚಾವುಮಾಡಿತು. ಅದೇ ವ್ಯಾನು ಹತ್ತಿ
ಸವರ್ಣೀಯರು ಹುಣಸೂರಿಗೆ ಹೋಗಿ
ಪೋಲಿಸರೊಡನೆ ಬಂದರು. ಅಷ್ಟಕ್ಕೆ
ಎಲ್ಲರೂ ತಂತಮ್ಮ ಮನೆಗೆ ಹೋದರು
ಆದಿನವು ೨೯ನೇ ತಾರೀಖಿನ ಕೊಲೆ
ಮುನ್ನುಡಿ ಬರೆದು ನಡಿದಿತ್ತು.

ಆ ೨೫ನೇ ತಾರೀಖು ಕಳೆದು ಬೆ
ಸವರ್ಣೀಯ ಮುಖಂಡರು ಹಣವಂತರ
ವೆತ್ತಿ ಹರಿಜನರ ಮಟ್ಟಹಾಕಲು ಸುತ್ತ
ವರು ಸೇರುವ ಸಂತೇ ದಿನವನ್ನುಆಯ್ಕ
ಅಂದು ನಡೆಯು ಬಹುದಾದ ಗಲಾಟೆಗ
ಸರು ಊರಿಗೆ ಕಾಲಿಡದಿರಲು ದುಡ್ಡು
ಈ ಕಡೆ ಹರಿಜನ ಯಜಮಾನರು ಹು
ಪೋಲಿಸ್ ಸಬ್ ಇನ್ಸೆಪೆಕ್ಟರ್ ಗಂಗರಾ
ಕಂಡು ಹಿಂಗಿಂಗೆಸ್ವಾಮಿ ಅಂದಾಗ ಆತ
ನೀವು ರತ್ನಪುರಿಯವರಾ ? ನಿಮ್ಮ ಹೊ
ಏನ್ ಮಾಡೋದು ನಾವು ? ನೀವು
ಬಿಟ್ಟೋಗಿ ಎಲ್ಲಾ ಸರಿಯಾಗ್ತದೆ'ಎನ್ನಿ
ಊರಿಗೆ ಬಂದು ಎಲ್ಲರನ್ನೂ ಸೇರಿಸಿ
ಪೋಲಿಸ್ನೋರು ಹಿಂಗಂತವರೇ ! ಈ
ದಲ್ಲಿ ನಾವು ಯಾವ ಥರ ಇರೋದು ?
ವ್ಯವಸ್ಥೆ ಏನಾದ್ರೂ ಮಾಡುವ' ಅಂದ
ಸಬ್ ಇನ್ಸ್‌ಪೆಕ್ಟರ್ ಅಂದುದನ್ನೆಲ್ಲ ಸೇ
ನ ಪರಿಸ್ಥಿತಿಯನ್ನು ವಿವರಿಸಿ ಪೋಲಿಸ್

# ರತ್ನಪುರಿ ಹಿನ್ನೆಲೆ

...ಗಳಿಗೆ ಮಂತ್ರಿ ಶಾಸಕರಿಗೆ ಅರ್ಜಿಕಳಿಸಿ ...ಮೂಲಿಯಾಗಿ ಕಾದರು.

...ಲಿನ ಹಿನ್ನೆಲೆಯಲ್ಲಿ ರತ್ನಪುರಿಗೆ ೨೯ನೇ ...ಖು ಬಂತು. ೨೯ನೇ ತಾರೀಖಿನ ಹೊಟ್ಟೆ ...ಗಿದ್ದ ಕೊಲೆ ದಾಳಿಯು ಮಧ್ಯಾಹ್ನವೇ ...ಡಿತು. ನಾರಾಯಣ ಎಂಬ ಅಸ್ಪೃಶ್ಯ ...ಗನ ಎದುರೇ ಹೋಟ್ಲ • ಸವರ್ಣೀಯ ...ಗ ರಾಜೇಶ್‌ಭಟ್ ಎಂಬಾತ ಅಸ್ಪೃಶ್ಯ ...ಗಿಯೊಂದನ್ನು ಚುಡಾಯಿಸಿದಾಗ ಅಸಹನೆ ...ಡ ನಾರಾಯಣನಿಗೂ ರಾಜೇಶ್‌ಭಟ್‌ಗೂ ...ಯಿತು. ನಾರಾಯಣ ಒರಟ ಹಾಗೂ ...ದಿ ಎಂದು ಇಡೀ ಊರಿಗೆ ತಿಳಿದಿದ್ದೂ ಎದುರೇ ಬೇಕಂತಲೇ ರಾಜೇಶ್ ಭಟ್ ...ಗಿಯನ್ನು ಚುಡಾಯಿಸಿದ್ದನು. ಅಲ್ಲದೆ ...ಯಣನೊಡನೆ 'ಇವತ್ತು ನಿಮ್ಮ ಮೇಲೆ ...ಜ್ ಕಣ್ರೊ' ಎಂದೆಲ್ಲಾ ಎಂದೂ ಈ ರೀತಿ ಮಾತ್ನಾಡದವನು ಮಾತಾಡಿದಾಗ ನಾರಾ...ನೂ ರೋಪು ಹಾಕುತ್ತ ಆ ಹುಡುಗನನ್ನೇ ...ಲಿಸಲು ಆ ಹುಡುಗ ಸ್ಕೂಲಿಗೆ ನುಗ್ಗಲು ...ನಾರಾಯಣನು ಆ ಹುಡುಗನ ತಂದೆ ...ಗೆ 'ನಿಮ್ಮ ಹುಡುಗ ಹಿಂಗಿಂಗೆ ಅಂತಾನೆ. ...ಮ್ಮನಿರೊಲ್ಲ' ಎಂದು ಹೇಳಿ ಬಂದನು. ...ಸ್ವಲ್ಪಹೊತ್ತಲ್ಲೇ ಆ ನಾರಾಯಣನೂ ಮತ್ತು ...ಶ್ ಭಟ್‌ನೂ ಸವರ್ಣೀಯ ಕೇರಿಯಲಿ ...ಗ ಮತ್ತೆ ಮಾತಾಗಿ ನಾರಾಯಣನು ...ಡುಗನಿಗೆ ಸಕತ್ತಾಗಿ ಹೊಡೆದನು. ರಾಜೇಶ್ ಕೂದಲ ಹಿಡಿದು ಗುಂಜಾಡಿ ಬಿಟ್ಟು ...ಜ್ ಅಂತಾನೆ ಮಗ' ಎಂದು ಕಿತ್ತುಬಂದ ...ನ್ನು ಅವನ ಮುಖಕ್ಕೆ ಎಸೆದು ಬಂದನು. ...ರಾತಿಗೆ ಪುನಃ ಸಂಜೆಯೂ ನಾಗೋಜಿ ...ಮಗ ಜಗದೀಶ್‌ಗೂ ನಾರಾಯಣನಿಗೂ ...ಗಲು, ಮಗನ ಸಪೋರ್ಟಿಗೆ ನಾಗೋಜಿ ...ಮತ್ತು ಸವರ್ಣೀಯರೂ, ನಾರಾಯಣನ ...ಗೆ ಹರಿಜನ ಹುಡುಗರೂ ಯಜಮಾ...ದು ಯಾವಾಗ ಹರಿಜನ ಯಜಮಾನ ...ಬಿತ್ತೋ ಆವಾಗ ಹರಿಜನ ಹುಡುಗರು ...ಜಿರಾವ್‌ಗೆ ತಾರಮಾರ ಹೊಡೆದರು. ಆ ...ಸ್ವಲ್ಪ ಕಾಲ ಜಗಳನಿಂತು ಮುಂದಿನ ಸಿದ್ಧತೆಗಳು ನಡೆದವು. ಸವರ್ಣೀಯರು ...ತುಂಬ ಕಲ್ಲು ತುಂಬಿಕೊಂಡು ಬಂದು ಕಾದರು. ದಲಿತರೂ ಕೇರಿಲಿದ್ದ ಕಲ್ಲು ...ದರು. ಸರಸ್ಥಳದ ಸವರ್ಣೀಯರೂ ಊರಲ್ಲಿ ಅಡ್ಡಾಡುವುದ ಗಮನಿಸಿದ ದಲಿತರಿಗೆ ತಮ್ಮ ಕಮ್ಮಿ ಸಂಖ್ಯೆಯ ಅರಿವಾಗಿ ಮೋಹನ್ ದಾಸ್ ಎಂಬ ಹುಡುಗನ ಕೈಲಿ ಹುಣಸೂರು ಪೋಲಿಸ್‌ಗೆ ಹೇಳಿಕಳಿಸಿದರು. ಪೋಲಿಸ್ ಆತನನ್ನು ಲಾಕಪ್ಪಿನಲ್ಲಿಟ್ಟು ಕೇಸಿಗೆ ಸಿಕ್ಕಿಸಿದರು. ಬದಲಾಗಿ ಪೋಲಿಸರು ತಕ್ಷಣವೇ ಬಂದಿದ್ದರೆ ಮುಂದಾಗಬಹುದಾದುದನ್ನು ತಪ್ಪಿಸ ಬಹುದಿತ್ತು.

೨೯ರ ರಾತ್ರಿ ಗಲಾಟೆ ಎಷ್ಟೊತ್ತಿಗಾಯ್ತು ಎನ್ನುವುದನ್ನ ಕರಾರುವಕ್ಕಾಗಿ ಹೇಳದ ಎಲ್ಲರೂ ಹೇಗಾಯ್ತು ಎಂಬುದಕ್ಕೆ ಹೆಚ್ಚುಕಮ್ಮಿ ಕಂಡವರೆಲ್ಲರೂ ಒಂದೇ ರೀತಿ ಹೇಳುವರು. ಕೊನೆವರೆಗ್ಗೂ ಆಗಲಾಟೆಯಲ್ಲಿದ್ದ ಒಬ್ಬ ಹರಿಜನ ಯುವಕನು ಹೇಳಿದ್ದು ಹೀಗಿದೆ; "ಸುಮಾರು ಮುರ್ರ್ನಾಲ್ಕು ಕಡೆಯಿಂದ ಗುಂಪು ಬಂದು ನಮ್ಮ ಮೇಲೆ ಒಂದೇ ಸಾರಿಬಿತ್ತು. ಮನೇಲಿದ್ದ ದೊಣ್ಣೆ ಅವು ಇವು ನೋಡ್ರಯ್ಯ ಅನ್ನೋಹೊತ್ತಿಗೆ ಕಲ್ಲು ಎಸೆದಾಟ ಜಾಸ್ತಿಯಾಯ್ತು. ನಾವು ಹೆಚ್ಚೆಂದರೆ ನೂರರ ಒಳಗೆ. ಆ ಕಡೆಯವರು ಸುತ್ತಾ ಹಳ್ಳಿಯವರೂ ಸೇರಿ ಮೂನ್ನೂರರ ಮೇಲೆ. ನಾವು ಕಲ್ಲೊಡೆತ ತಪ್ಪಿಸಿಕೊಳ್ಳಲು ಗಾಡಿಗಳನ್ನು ಎಳೆತಂದು ನಿಲ್ಲಿಸಿಕೊಂಡೆವು. ನಾವೂ ಕಲ್ಲು ಹೊಡೆವೂ ಹೊಡೆದು ಸುಸ್ತಾಗಿ ಆ ಕಡೆಯ ಕಲ್ಲು ಸೀಸೆ ಏಟಿಂದ ತಪ್ಪಿಸಿಕೊಂಡು ಹೇಗೆ ಪ್ರಾಣ ಉಳಿಸಿಕೊಳ್ಳೊದು ಅನ್ನೋದೆ ಅರ್ಥವಾಗಲಿಲ್ಲ. ನಮ್ಮ ಕಡೆಯ ಕಲ್ಲುಗಳೆಲ್ಲ ತೀರಿ ಆ ಕಡೆಯಿಂದ ಸೆಕೆಂಡಿಗೂ ಬಿಡುವು ಕೊಡದೆ ಬರುತ್ತಿದ್ದ ಕಲ್ಲು ಸೀಸೆ ತಗದೇ ಸುಮಾರು ಹೊತ್ತು ಹೊಡೆದೆವು. ಆದರೆ ಸವರ್ಣೀಯರು, ನಮ್ಮ ಮನೆ ಮಠಗಳಿಗೆ ಬೆಂಕಿ ಹಚ್ಚುತಾ ಸುಟ್ಟುಗೊಂಡು ಬರತೊಡಗಿ ಪುಟ್ಟಮ್ಮನ ಹುಲ್ಲು ಗುಡಿಸಲು, ದನದಕೊಟ್ಟಗೆ, ರಾಮಸ್ವಾಮಿ ಹುಲ್ಲು ಗುಡಿಸಲು, ನರಸಿಂಹಯ್ಯನವರ ಹೆಂಚಿನ ಮನೆ ಹಾಲಿನ ಡೈರಿ, ಹುಲ್ಲು ಬಣವೆ, ಎತ್ತಿನಗಾಡಿ ಸೈಕಲ್ಲು ಮುಂತಾಗಿ ಸುಡುತ್ತ ಬಂದರು. ಬೀದಿ ದೀಪ ಟ್ಯೂಬ್‌ಲೈಟ್ ಹೊಡೆದು ಕತ್ತಲು ಮಾಡಿ ಸುಟ್ಟ ಬೆಂಕಿ ಬೆಳಕು ಮಾಡಿದರು. ನಾನು ಉಳಿದರೆ ಸಾಕು ಎಂದು ಕಾಡು ಬಿದ್ದು ಓಡಿದೆ, ಅಷ್ಟು ದೂರಹೋಗಿ ಉರಿಯುತ್ತಿದ್ದ ಊರಕಡೆ ನೋಡಕ್ಕಾಗಲಿಲ್ಲ," ಈ ಸ್ಥಿತಿಗೆ ಸಿಕ್ಕ ಮುಕ್ಕಾಲು ಪಾಲು ದಲಿತರು ರಾತ್ರೋ ರಾತ್ರಿ ಕಾಡು ಮೇಡು ಅಲೆದು ಊರನ್ನೆಬಿಟ್ಟರು. ವಿಶ್ವ ಶಾಂತಿ ಸಂಸ್ಥೆಯು ಎಲ್ಲಾ ಜಾತಿಯ ಬೀದಿ ಮಕ್ಕಳೂ ಬೀದಿ ಪಾಲಾದವು. ಭಯವನ್ನು ಬೆನ್ನಿಗೆ ಕಟ್ಟಿಕೊಂಡು ಊರೂರು ಅಲೆದಾಡಿದವು.

೨೯ರ ಗಲಭೆಯು ಒಬ್ಬ ಸವರ್ಣೀಯನ ಜೀವವನ್ನು ಮತ್ತೊಬ್ಬನ ತೋಳನ್ನೂ ಬಲಿತೆಗೆದುಕೊಂಡಿತು. ಗುಂಡೇಟನಿಂದಲೆ ಈ ಸಾವು ನೋವು ಆಗಿದ್ದು ಎರಡು ಕಡೆಯವರೂ ಬಂದೂಕಬಳಸಿದ್ದು ಯಾವ ಕಡೆಯಿಂದ ಹೇಗೆ ಈ ಸಾವು ನೋವು ಆಯ್ತುಎಂಬುದರ ಗೊಂದಲದಲ್ಲಿದೆ. ಇಂಥ ಗೊಂದಲ ಇರುವಾಗ, ಎಸ್.ಪಿ. ರೇವಣಸಿದ್ದಯ್ಯನವರು ಇನ್‌ವೆಸ್ಟಿಗೇಷನ್ ಮ್ಮಾಡುವ ಸವಾಲಿಗೆ ತಮ್ಮನ್ನು ತೊಡಗಿಸಿಕೊಳ್ಳದೆ ಹರಿಜನರ ಜ್ಞಾನಪ್ರಕಾಶ್ ಗುಂಡಿಗೇ ಈ ಅನಾಹುತ ಆಯ್ತೆಂದು ಖಚಿತ ಹೇಳಿಕೆ ನೀಡಿ ನ್ಯಾಯಾಧೀಶರಂತೆ ತೀರ್ಪಿತ್ತಿದ್ದು ನ್ಯಾಯಲಯದಲ್ಲಿ ಹಾಸ್ಯಾಸ್ಪದ ವ್ಯಕ್ತಿಯಾಗಿದ್ದಾರೆ. ಒರ್ವ ಸವರ್ಣೀಯ ಮುದುಕಿಯು ಮೇಲಕ್ಕೆ ಕೈಚಾಚಿ "ಆ ಮೇಲಿರೊ ಭಗವಂತ ನೋಡ್ಕಂಡು ಸುಮ್ಮನಿರುತ್ತಾನಪ್ಪ ! ಹೊಲಾರನ್ನ ಕೊಲೆ ಮಾಡಬೇಕು ಅಂತ ನಮ್ಮ ಕಡೆಯವರು ಪೋಲಿಸರಿಗೆ ದುಡ್ಡು ಸುರಿದು ಆ ಗಲಾಟೆಗೆ ಆ ಪೋಲಿಸ್ನೋರು ಬರಬಾರದಂತೆ ಮಾಡಿಕೊಂಡರು. ಈಗ ಸತ್ತವರು ಯಾರು ? ಆ ಮುರ್ರ್ಮಕ್ಕ ಪೋಲಿಸ್ನೋರು ಬಂದಿದರ್ದ್ರೆ ಪ್ರಾಣ ಉಳಿತಿತ್ತು ಕಣಪ್ಪ. ಈಗ ಒಬ್ಬ ಸತ್ತಾದ ಮೇಲೆ ಕೇಸಾಕಲು ಲಂಚ ಕೊಡೋಕೆ ಅಂತ ಮನೆಗೆ ಹತ್ತುರೂಪಾಯಿನಂತೆ ಎತ್ತುತ್ತವರೆ. ಇನ್ನೆಷ್ಟು ಜನ ಸಾಯಿಸ್ತಾರೋ ಏನೊ. ಹೋಗೋದು ಹೊಯ್ತುನಮ್ಮಂಥವರ ಜೀವನಾರು ಹೋಗಲ್ಲ." ಎಂದು ತನ್ನಷ್ಟಕ್ಕೆ ತಾನೆ ಆಡಿದ ಆಕೆಯ ಮಾತು ನಿಟ್ಟುಸಿರಿನೊಡನೆ ನಿಜವ ನುಡಿಯುತ್ತಿತು. ಅಂದು ಆದ ಸಾವು ನೋವಿಗೆ ಸವರ್ಣೀಯ ಹಣವಂತರೂ ಪೋಲಿಸರೂ ಮುಕ್ಕಾಲುಪಾಲು ಕಾರಣರು. ಈ ಹಿನ್ನಲೆಯೆಲ್ಲ ಸೇರಿದಂತೆ ಸಮಗ್ರ ತನಿಖೆಯು ತಕ್ಷಣವೇ ಆದಲ್ಲಿ ಮುಂದಿನ ಅನಾಹುತಗಳನ್ನು ತಪ್ಪಿಸಬಹುದು. ●

---

**"ಹೊಲೆಯರನ್ನು ಕೊಲೆ ಮಾಡಬೇಕಂತ ನಮ್ಮ ಕಡೆಯವರು ದುಡ್ಡು ಸುರಿದು ಗಲಾಟೆಗೆ ಪೋಲೀಸರು ಬರದಂತೆ ಮಾಡಿಕೊಂಡರು. ಈಗ ಸತ್ತವರು ಯಾರು? ಆಮುರ್ರ್ಮಕ್ಕ ಪೋಲೀಸ್ನೋರು ಬಂದ್ದಿದ್ರೆ ಪ್ರಾಣ ಉಳಿತಿತ್ತು ಕಣಪ್ಪ. ಈಗ ಒಬ್ಬ ಸತ್ತಾದ ಮೇಲೆ ಕೇಸಾಕಕ್ಕೆ, ಲಂಚ ಕೊಡಾಕೆ ಅಂತ ಮನೆಗೆ ಹತ್ತು ರೂಪಾಯಿನಂತೆ ಎತ್ತುತ್ತವರೆ ಇನ್ನೆಷ್ಟು ಜನ ಸಾಯಿಸ್ತಾರೊ ಏನೋ ?"**

---

# : ರತ್ನಪುರಿ ಹಿನ್ನೆಲೆ

ರಿಗಳಿಗೆ ಮಂತ್ರಿ ಶಾಸಕರಿಗೆ ಅರ್ಜಿಕಳಿಸಿ
ಾಮೂಲಿಯಾಗಿ ಕಾದರು.

ಮೇಲಿನ ಹಿನ್ನೆಲೆಯಲ್ಲಿ ರತ್ನಪುರಿಗೆ ೨೯ನೇ
ರೀಖು ಬಂತು. ೨೯ನೇ ತಾರೀಖಿನ ಹೊಟ್ಟೆ
ಳಗಿದ್ದ ಕೊಳೆ ದಾಳಿಯು ಮಧ್ಯಾಹ್ನವೇ
ದಾಡಿತು. ನಾರಾಯಣ ಎಂಬ ಅಸ್ಪೃಶ್ಯ
ಡುಗನ ಎದುರೇ ಹೋಟ್ಲ ಸವರ್ಣೀಯ
ಡುಗ ರಾಜೇಶ್‌ಭಟ್ ಎಂಬಾತ ಅಸ್ಪೃಶ್ಯ
ಡುಗಿಯೊಂದನ್ನು ಚುಡಾಯಿಸಿದಾಗ ಅಸಹನೆ
ಂಡ ನಾರಾಯಣನಿಗೂ ರಾಜೇಶ್‌ಭಟ್‌ಗೂ
ತಾಯಿತು. ನಾರಾಯಣ ಒರಟ ಹಾಗೂ
ವಾದಿ ಎಂದು ಇಡೀ ಊರಿಗೆ ತಿಳಿದಿದ್ದೂ
ನ ಎದುರೇ ಬೇಕಂತಲೇ ರಾಜೇಶ್ ಭಟ್
ಡುಗಿಯನ್ನು ಚುಡಾಯಿಸಿದ್ದನು. ಅಲ್ಲದೆ
ರಾಯಣನೊಡನೆ 'ಇವತ್ತು ನಿಮ್ಮ ಮೇಲೆ
ರೇಂಜ್ ಕಣ್ರೊ' ಎಂದೆಲ್ಲಾ ಎಂದೂ ಈ ರೀತಿ
ಗಿ ಮಾತ್ನಾಡದವನು ಮಾತಾಡಿದಾಗ ನಾರಾ
ನೂ ರೋಪು ಹಾಕುತ್ತ ಆ ಹುಡುಗನನ್ನೇ
ಾಲಿಸಲು ಆ ಹುಡುಗ ಸ್ಕೂಲಿಗೆ ನುಗ್ಗಲು
ಗಾ ನಾರಾಯಣನು ಆ ಹುಡುಗನ ತಂದೆ
ಬಿಗೆ 'ನಿಮ್ಮ ಹುಡುಗ ಹಿಂಗಿಂಗೆ ಅಂತಾನೆ.
ಸುಮ್ಮನಿರೊಲ್ಲ' ಎಂದು ಹೇಳಿ ಬಂದನು.
ಸ್ವಲ್ಪಹೊತ್ತಲ್ಲೇ ಆ ನಾರಾಯಣನೂ ಮತ್ತು
ೇಶ್ ಭಟ್‌ನೂ ಸವರ್ಣೀಯ ಕೇರಿಯಲಿ
ದಾಗ ಮತ್ತೆ ಮಾತಾಗಿ ನಾರಾಯಣನು
ಡುಗನಿಗೆ ಸಕತ್ತಾಗಿ ಹೊಡೆದನು. ರಾಜೇಶ್
ನ ಕೂದಲ ಹಿಡಿದು ಗುಂಜಾಡಿ ಬಿಟ್ಟು
ರೇಂಜ್ ಅಂತಾನೆ ಮಗ' ಎಂದು ಕಿತ್ತುಬಂದ
ಲನ್ನು ಅವನ ಮುಖಕ್ಕೆ ಎಸೆದು ಬಂದನು.
ಮಾತಿಗೆ ಪುನಃ ಸಂಜೆಯೂ ನಾಗೋಜಿ
ಮಗ ಜಗದೀಶ್‌ಗೂ ನಾರಾಯಣನಿಗೂ
ವಾಗಲು, ಮಗನ ಸಪೋರ್ಟಿಗೆ ನಾಗೋಜಿ
ಮತ್ತು ಸವರ್ಣೀಯರೂ, ನಾರಾಯಣನ
ರ್ಟಿಗೆ ಹರಿಜನ ಹುಡುಗರೂ ಯಜಮಾ
ಬಂದು ಯಾವಾಗ ಹರಿಜನ ಯಜಮಾನ
ಟು ಬಿಟ್ರೋ ಆವಾಗ ಹರಿಜನ ಹುಡುಗರು
ೇಜಿರಾವ್‌ಗೆ ತಾರಮಾರ ಹೊಡೆದರು. ಆ
ಸ್ವಲ್ಪ ಕಾಲ ಜಗಳನಿಂತು ಮುಂದಿನ
ಸಿದ್ಧತೆಗಳು ನಡೆದವು. ಸವರ್ಣೀಯರು
ತುಂಬ ಕಲ್ಲು ತುಂಬಿಕೊಂಡು ಬಂದು
ಗೆ ಕಾದರು. ದಲಿತರೂ ಕೇರಿಲಿದ್ದ ಕಲ್ಲು
ಕಿದರು. ಪರಸ್ಪರ ಸವರ್ಣೀಯರೂ

ಊರಲ್ಲಿ ಅಡ್ಡಾಡುವುದ ಗಮನಿಸಿದ ದಲಿತರಿಗೆ ತಮ್ಮ ಕಮ್ಮಿ ಸಂಖ್ಯೆಯ ಅರಿವಾಗಿ ಮೋಹನ್ ದಾಸ್ ಎಂಬ ಹುಡುಗನ ಕೈಲಿ ಹುಣಸೂರು ಪೋಲಿಸ್‌ಗೆ ಹೇಳಿಕಳಿಸಿದರು. ಪೋಲಿಸ್ ಆತನನ್ನು ಲಾಕಪ್ಪಿನಲ್ಲಿಟ್ಟು ಕೇಸಿಗೆ ಸಿಕ್ಕಿಸಿದರು. ಬದಲಾಗಿ ಪೋಲಿಸರು ತಕ್ಷಣವೇ ಬಂದಿದ್ದರೆ ಮುಂದಾಗಬಹುದಾದುನ್ನು ತಪ್ಪಿಸ ಬಹುದಿತ್ತು.

೨೯ರ ರಾತ್ರಿ ಗಲಾಟೆ ಎಷ್ಟೊತ್ತಿಗಾಯ್ತು ಎನ್ನುವುದನ್ನ ಕರಾರುವಕ್ಕಾಗಿ ಹೇಳದ ಎಲ್ಲರೂ ಹೇಗಾಯ್ತು ಎಂಬುದಕ್ಕೆ ಹೆಚ್ಚುಕಮ್ಮಿ ಕಂಡವರೆಲ್ಲರೂ ಒಂದೇ ರೀತಿ ಹೇಳುವರು, ಕೊನೆವರೆಗ್ಗೂ ಆಗಲಾಟೆಯಲ್ಲಿದ್ದ ಒಬ್ಬ ಹರಿಜನ ಯುವಕನು ಹೇಳಿದ್ದು ಹೀಗಿದೆ; "ಸುಮಾರು ಮುರ್ನಾಲ್ಕು ಕಡೆಯಿಂದ ಗುಂಪು ಬಂದು ನಮ್ಮ ಮೇಲೆ ಒಂದೇ ಸಾರಿಬಿತ್ತು. ಮನೇಲಿದ್ದ ದೊಣ್ಣೆ ಅವು ಇವು ನೋಡ್ರಯ್ಯ ಅನ್ನೋಹೊತ್ತಿಗೆ ಕಲ್ಲು ಎಸೆದಾಟ ಜಾಸ್ತಿಯಾಯ್ತು. ನಾವು ಹೆಚ್ಚೆಂದರೆ ನೂರರ ಒಳಗೆ. ಆ ಕಡೆಯುವರು ಸುತ್ತಾ ಹಳ್ಳಿಯವರೂ ಸೇರಿ ಮೂನ್ನೂರರ ಮೇಲೆ. ನಾವು ಕಲ್ಲೊಡೆತ ತಪ್ಪಿಸಿಕೊಳ್ಳಲು ಗಾಡಿಗಳನ್ನು ಎಳೆತಂದು ನಿಲ್ಲಿಸಿಕೊಂಡೆವು. ನಾವೂ ಕಲ್ಲು ಹೊಡೆನೂ ಹೊಡೆದು ಸುಸ್ತಾಗಿ ಆ ಕಡೆಯ ಕಲ್ಲು ಸೀಸೆ ಏಟಿಂದ ತಪ್ಪಿಸಿಕೊಂಡು ಹೇಗೆ ಪ್ರಾಣ ಉಳಿಸಿಕೊಳ್ಳೊದು ಅನ್ನೋದೆ ಅರ್ಥವಾಗಲಿಲ್ಲ. ನಮ್ಮ ಕಡೆಯ ಕಲ್ಲುಗಳೆಲ್ಲ ತೀರಿ ಆ ಕಡೆಯಿಂದ ಸೆಕೆಂಡಿಗೂ ಬಿಡುವು ಕೊಡದೆ ಬರುತ್ತಿದ್ದ ಕಲ್ಲು ಸೀಸೆ ತಗದೇ ಸುಮಾರು ಹೊತ್ತು ಹೊಡೆದೆವು. ಆದರೆ ಸವರ್ಣೀಯರು, ನಮ್ಮ ಮನೆ ಮಠಗಳಿಗೆ ಬೆಂಕಿ ಹಚ್ಚುತಾ ಸುಟ್ಟುಗೊಂಡು ಬರತೊಡಗಿ ಪುಟ್ಟಮ್ಮನ ಹುಲ್ಲು ಗುಡಿಸಲು, ದನದಕೊಟ್ಟಗೆ, ರಾಮುಸ್ವಾಮಿ ಹುಲ್ಲು ಗುಡಿಸಲು, ನರಸಿಂಹಯ್ಯನವರ ಹೆಂಚಿನ ಮನೆ ಹಾಲಿನ ಡೈರಿ, ಹುಲ್ಲು ಬಣವೆ, ಎತ್ತಿನಗಾಡಿ ಸೈಕಲ್ಲು ಮುಂತಾಗಿ ಸುಡುತ್ತ ಬಂದರು. ಬೀದಿ ದೀಪ ಟ್ಯೂಬ್‌ಲೈಟ್ ಹೊಡೆದು ಕತ್ತಲು ಮಾಡಿ ಸುಟ್ಟ ಬೆಂಕಿ ಬೆಳಕು ಮಾಡಿದರು. ನಾನು ಉಳಿದರೆ ಸಾಕು ಎಂದು ಕಾಡು ಬಿದ್ದು ಓಡಿದೆ, ಅಷ್ಟು ದೂರಹೋಗಿ ಉರಿಯುತ್ತಿದ್ದ ಊರಕಡೆ ನೋಡಕ್ಕಾಗಲ್ಲಿಲ್ಲ." ಈ ಸ್ಥಿತಿಗೆ ಸಿಕ್ಕ ಮುಕ್ಕಾಲು ಪಾಲು ದಲಿತರು ರಾತ್ರೋರಾತ್ರಿ ಕಾಡು ಮೇಡು ಅಲೆದು ಊರನ್ನೆಬಿಟ್ಟರು. ವಿಶ್ವ ಶಾಂತಿ ಸಂಸ್ಥೆಯ ಎಲ್ಲಾ ಜಾತಿಯ ಬೀದಿ ಮಕ್ಕಳೂ ಬೀದಿ ಪಾಲಾದವು. ಭಯವನ್ನು ಬೆನ್ನಿಗೆ ಕಟ್ಟಿಕೊಂಡು ಊರೂರು ಅಲೆದಾಡಿದವು.

೨೯ರ ಗಲಭೆಯು ಒಬ್ಬ ಸವರ್ಣೀಯನ ಜೀವವನ್ನು ಮತ್ತೊಬ್ಬನ ತೋಳನ್ನೂ ಬಲಿತೆಗೆದುಕೊಂಡಿತು. ಗುಂಡೇಟನಿಂದಲೆ ಈ ಸಾವು ನೋವು ಆಗಿದ್ದು ಎರಡು ಕಡೆಯವರೂ ಬಂದೂಕಬಳಸಿದ್ದು ಯಾವ ಕಡೆಯಿಂದ ಹೇಗೆ ಈ ಸಾವು ನೋವು ಆಯ್ತುಎಂಬುದರ ಗೊಂದಲದಲ್ಲಿದೆ. ಇಂಥ ಗೊಂದಲ ಇರುವಾಗ, ಎಸ್.ಪಿ. ರೇವಣಸಿದ್ದಯ್ಯನವರು ಇನ್‌ವೆಸ್ಟಿಗೇಷನ್ ಮಾಡುವ ಸವಾಲಿಗೆ ತಮ್ಮನ್ನು ತೊಡಗಿಸಿಕೊಳ್ಳದೆ ಹರಿಜನರ ಜ್ಞಾನಪ್ರಕಾಶ್ ಗುಂಡಿಗೇ ಈ ಅನಾಹುತ ಆಯ್ತೆಂದು ಖಚಿತ ಹೇಳಿಕೆ ನೀಡಿ ನ್ಯಾಯಾದೀಶರಂತೆ ತೀರ್ಪಿತ್ತಿದ್ದು ನ್ಯಾಯಲಯದಲ್ಲಿ ಹಾಸ್ಯಾಸ್ಪದ ವ್ಯಕ್ತಿಯಾಗಿದ್ದಾರೆ. ಒರ್ವ ಸವರ್ಣೀಯ ಮುದುಕಿಯು ಮೇಲಕ್ಕೆ ಕೈಚಾಚಿ "ಆ ಮೇಲಿರೊ ಭಗವಂತ ನೋಡ್ಕಂಡು ಸುಮ್ಮನಿರುತ್ತಾನಪ್ಪ! ಹೊಲಾರನ್ನ ಕೊಲೆ ಮಾಡಬೇಕು ಅಂತ ನಮ್ಮ ಕಡೆಯುವರು ಪೋಲಿಸರಿಗೆ ದುಡ್ಡು ಸುರಿದು ಆ ಗಲಾಟೆಗೆ ಆ ಪೋಲಿಸ್ನೋರು ಬರಬಾರದಂತೆ ಮಾಡಿಕೊಂಡರು. ಈಗ ಸತ್ತವರು ಯಾರು? ಆ ಮುರ್ಮಕ್ಕ ಪೋಲಿಸ್ನೋರು ಬಂದಿದರ್ದೆ ಪ್ರಾಣ ಉಳಿತಿತ್ತು ಕಣಪ್ಪ. ಈಗ ಒಬ್ಬ ಸತ್ತಾದ ಮೇಲೆ ಕೇಸಾಕಲು ಲಂಚ ಕೊಡೋಕೆ ಅಂತ ಮನೆಗೆ ಹತ್ತುರೂಪಾಯಿನಂತೆ ಎತ್ತುತ್ತವರೆ. ಇನ್ನೆಷ್ಟು ಜನ ಸಾಯಿಸ್ತಾರೋ ಏನೊ. ಹೋಗೋದು ಹೊಯ್ತುನಮ್ಮಂಥವರ ಜೀವನಾರು ಹೋಗಲ್ಲ." ಎಂದು ತನ್ನಷ್ಟಕ್ಕೆ ತಾನೆ ಆಡಿದ ಆಕೆಯ ಮಾತು ನಿಟ್ಟುಸಿರಿನೊಡನೆ ನಿಜವ ನುಡಿಯುತ್ತಿತು. ಅಂದು ಆದ ಸಾವು ನೋವಿಗೆ ಸವರ್ಣೀಯ ಹಣವಂತರೂ ಪೋಲಿಸರೂ ಮುಕ್ಕಾಲುಪಾಲು ಕಾರಣರು. ಈ ಹಿನ್ನಲೆಯೆಲ್ಲ ಸೇರಿದಂತೆ ಸಮಗ್ರ ತನಿಖೆಯು ತಕ್ಷಣವೇ ಆದಲ್ಲಿ ಮುಂದಿನ ಅನಾಹುತಗಳನ್ನು ತಪ್ಪಿಸಬಹುದು.

---

**"ಹೊಲೆಯರನ್ನು ಕೊಲೆ ಮಾಡಬೇಕಂತ ನಮ್ಮ ಕಡೆಯವರು ದುಡ್ಡು ಸುರಿದು ಗಲಾಟೆಗೆ ಪೋಲೀಸರು ಬರದಂತೆ ಮಾಡಿಕೊಂಡರು. ಈಗ ಸತ್ತವರು ಯಾರು? ಆಮುರ್ಮಕ್ಕ ಪೋಲೀಸ್ನೋರು ಬಂದ್ದಿದ್ರೆ ಪ್ರಾಣ ಉಳಿತಿತ್ತು ಕಣಪ್ಪ. ಈಗ ಒಬ್ಬ ಸತ್ತಾದ ಮೇಲೆ ಕೇಸಾಕಕ್ಕೆ, ಲಂಚ ಕೊಡಾಕೆ ಅಂತ ಮನೆಗೆ ಹತ್ತು ರೂಪಾಯಿನಂತೆ ಎತ್ತುತ್ತವರೆ ಇನ್ನೆಷ್ಟು ಜನ ಸಾಯಿಸ್ತಾರೊ ಏನೋ?"**

# ಚಿತ್ರದುರ್ಗ ದ್ಯಾವರಹಳ್ಳಿ ಸಮೀಕ್ಷೆ ಪತ್ರ

ದಲಿತ ಸಂಘರ್ಷ ಸಮಿತಿ ಆದೇಶದಂತೆ ನಾನು ದ್ಯಾವರಹಳ್ಳಿಗೆ ತಾ. 11-6-81 ಹೋಗಿದ್ದೆನಷ್ಟೆ. ಸದರಿ ಹಳ್ಳಿಯಲ್ಲಿ 30 ಹರಿಜನರ ಕುಟುಂಬಗಳನ್ನು ಬಿಟ್ಟು ಬೇರೆ ಯಾವ ಕೋಮಿನವರ ಮನೆಗಳಿಲ್ಲದಿರುವುದರಿಂದ, " ಬೇಗಾರ ಕಪಲಿ " ಅರ್ಥಾತ್ ಮಾದಿಗರ ವಾಸಸ್ಥಳ ಎಂಬ ಹೆಸರು ಈ ಹಳ್ಳಿಗೆ ಬಂದಿತ್ತು. ಎರಡು ವರ್ಷಗಳ ಹಿಂದೆ ಸರ್ಕಾರ ಬೇಗಾರ ಕಪಲಿಗೆ ದ್ಯಾವರಹಳ್ಳಿ ಎಂದು ನಾಮಕರಿಸಿದೆ. ಆದರೆ ಬಸ್ಸುಗಳ ನೌಕರರು ಮತ್ತು ಬೇರೆ ಕೋಮಿನವರು ಉದ್ದೇಶ ಪೂರ್ವಕವಾಗಿ ಈ ಹಳ್ಳಿಯ ಜನರನ್ನು "ಬೇಗಾರ ಕಪಲಿ" ಜನರೆಂದು ಹಿಯ್ಯಾಳಿಸುತ್ತಿದ್ದರು. ಇದನ್ನು ದ್ಯಾವರಹಳ್ಳಿ ಒಬ್ಬ ವಿದ್ಯಾವಂತರು ಪ್ರತಿಭಟಿಸಿದಾಗ ಶ್ರೀಶೈಲ ಬಸ್ಸಿನ ನೌಕರರು ಅವರಿಗೆ ಥಳಿಸಿದರು. ಇದರಿಂದ ರೋಚ್ಚಿಗೆದ್ದ ಕೆಲವು ಹರಿಜನರು ಮರುದಿನ ಆ ಬಸ್ಸಿನ ನೌಕರರಿಗೆ ಹೊಡೆದಿದ್ದರು. ಇದಾದ ನಾಲ್ಕು ತಿಂಗಳ ತರುವಾಯ ಅಂದರೆ ತಾ. 26–5–81ರ ಹಾಡು ಹಗಲು 11 ಘಂಟೆಯ ಸಮಯದಲ್ಲಿ ಬಸ್ಸಿನ ನೌಕರರು ಅಕ್ಕಪಕ್ಕದ ಊರುಗಳ ಕಿಡಿಗೇಡಿಗಳೊಡನೆ ದ್ಯಾವರಹಳ್ಳಿಗೆ ನುಗ್ಗಿ ತಾವು ತಂದಿದ್ದ ಅಪಾಯಕಾರಿ

ಸಮೀಕ್ಷಕ : ಬಿ. ಪಿ. ಪ್ರಕಾಶಮೂರ್ತಿ

ಆಯುಧಗಳಿಂದ, ಸ್ತ್ರೀಯರು ಮತ್ತು ಅಂಗವಿಕಲರೆನ್ನದೆ ಚೆನ್ನಾಗಿ ಥಳಿಸಿರುವರು.

ಈ ಹಳ್ಳಿಯ ಜನರು ಭಯ ಭೀತಿಯ ಬಿಗಿ ಮುಷ್ಟಿಯಲ್ಲಿರುವರು. ದೌರ್ಜನ್ಯ ನಡೆದ ಒಂದು ವಾರದವರೆಗೆ ಹಳ್ಳಿಯ ಜನರು ತಮ್ಮ ಕಾಲುಗಳನ್ನು ಬಂದಿಸಿಕೊಂಡು ಯಾವ ಕಡೆಗೂ ಓಡಾಡುವ ಸ್ಥಿತಿ ಇದ್ದಿಲ್ಲ. ಇಷ್ಟಕ್ಕೆ ಸುಮ್ಮನಿರದ ದುಷ್ಕರ್ಮಿಗಳು ಚಳ್ಳಕೆರೆ ಮತ್ತು ಪರುಶರಾಮಪುರದಲ್ಲಿ ದ್ಯಾವರನಹಳ್ಳಿ ಹರಜನರು ಸಿಕ್ಕಿದರೆ ಥಳಿಸಲು ಹವಣಿಸುತ್ತಿರುವರು.

ಇಷ್ಟೇಲ್ಲಾ ನಡೆದಾಗ್ಯೂ ಪರುಶುರಾಮಪುರದ ಪೋಲೀಸುಠಾಣೆಯ ಅಧಿಕಾರಿ ಹರಿಜನರಿಗೆ ರಕ್ಷಣೆ ಕೊಟ್ಟಿಲ್ಲದಿರುವುದಲ್ಲದೆ ದೌರ್ಜನ್ಯಕಾರರ ಪರವಾಗಿ ಕೆಲಸ ಮಾಡುತ್ತಿದ್ದುದರಿಂದ 70 ಜನ ಆರೋಪಿಗಳಲ್ಲಿ ಯಾರನ್ನು ಬಂಧಿಸಿರಲಿಲ್ಲ ಈ ವಿಷಯ ಎಸ್.ಪಿ.ಯವರಿಗೆ ತಿಳಿಸಿದ್ದರಿಂದ ಅವರು ಸದರಿ ಪೋಲೀಸ್ ಅಧಿಕಾರಿಗೆ ಅಮಾನತ್ ಮಾಡುವ ಭಯ ಹುಟ್ಟಿಸಿದ್ದರಿಂದ ಕೆಲವರನ್ನು ಬಂಧಿಸಿ ಪುನಃ ಬಿಡುಗಡೆ ಮಾಡಿದ್ದಾರೆ. ಹರಿಜನರ ಪ್ರಾಣರಕ್ಷಣೆ ಅತ್ಯಾವಶ್ಯಕವಾಗಿ ಆಗಬೇಕಾಗಿದ್ದರಿಂದ ಒಬ್ಬ ನಿರಾಯುಧ ಪೋಲೀಸ್ ಪೇದೆಯನ್ನು ಗಸ್ತಿಗೆ ಬಿಟ್ಟಿರುವರು. [ನನ್ನ ಅಭಿಪ್ರಾಯದಂತೆ ಅವರಿಗೆ ನಿಜವಾದ ರಕ್ಷಣೆ ಕೊಡಬೇಕೆಂದಿದ್ದರೆ ಕೊನೆಯ ಪಕ್ಷ 10–15 ಆಯುಧಧಾರಿ ಪೋಲೀಸ್ ಪೇದೆಗಳನ್ನು ಬಿಡಬೇಕಾಗಿದೆ.]

ಈ ದೌರ್ಜನ್ಯಕೋರರು ಪ್ರತಿ ಬಸ್ ಮಾಲಿಕರಿಂದ ಮತ್ತು ಜನರಿಂದ ಹಣ ವಸೂಲಿ ಮಾಡಿ, ಆರ್ಥಿಕವಾಗಿ ಸುಧಾರಿಸಿರುವ ಹರಿಜನರ ಮೇಲೆ ಕಟ್ಲೆಗಳನ್ನು ಹಾಕಲು ಪ್ರಯತ್ನಿಸುತ್ತಿರುವರು.

ಈ ಘಟನೆ ನಡೆದ ಕೆಲವು ದಿನಗಳವರೆಗೆ ದ್ಯಾವರಹಳ್ಳಿ ಹರಿಜನರು ಹೊರ ಪ್ರಪಂಚ ಸಂಪರ್ಕ ಕಳೆದುಕೊಂಡಿದ್ದರು. ಯಾವ ಬಸ್ಸುಗಳೂ ಅಲ್ಲಿ ನಿಲ್ಲಿಸುತ್ತಿರಲಿಲ್ಲ, ಈಗಲೂ ಕೆಲವೇ ಬಸ್ಸುಗಳು ಮಾತ್ರ ನಿಲ್ಲಿಸುತ್ತಿವೆ.

### ಸಮೀಕ್ಷಕನ ಅನಿಸಿಕೆಗಳು

ಈ ಗ್ರಾಮದಲ್ಲಿ ಆರ್ಥಿಕವಾಗಿ ಸ್ವಲ್ಪ ಮುಂದುವರಿದ ಹರಿಜನರು ವಾಸಿಸುತ್ತಿರುವುದರಿಂದ ಯಾವ ಕಾಲದಲ್ಲಿ ದುಷ್ಕರ್ಮಿಗಳು ಬೆಂಕಿ ಹಚ್ಚುತ್ತಾರೊ ತಿಳಿಯದಂತಾಗಿದೆ. ದುಷ್ಕರ್ಮಿಗಳು ಇನ್ನೊಮ್ಮೆ ಬಲವಾದ ಸೈನ್ಯದೊಂದಿಗೆ ನುಗ್ಗುವ ಪರಿಸ್ಥಿತಿ ಇದೆ. ಹರಿಜನರಿಗೆಲ್ಲಾ ಪ್ರಾಣ ಭಯವಿದೆ. ಪೋಲಿಸ್‌ನವರಿಂದ ನಿಜವಾದ ರಕ್ಷಣೆ ಸಿಕ್ಕಿಲ್ಲ.

ಈ ಎಲ್ಲಾ ದುರಂತಗಳಿಗೆ ಕಮ್ಯುನಿಸ್ಟ್ ಪಾರ್ಟಿಯ ದಾವಣಗೆರೆ ಪ್ರಭಾವಿ ರಾಜಕಾರಣಿ ಪಂಪಾಪತಿ ಎಂ.ಎಲ್.ಎ. ಮತ್ತು ಸದರಿ ಹಳ್ಳಿಯ ಸವರ್ಣೀಯ ಹೋಟೆಲ್ ಮಾಲಿಕರ ಕೈವಾಡವಿದೆ ಎಂಬುದು ಕಂಡು ಬರುತ್ತದೆ. ದ್ಯಾವರನಹಳ್ಳಿ ಹರಿಜನರಿಗೆ ಬಸ್ಸಿನಲ್ಲಿ ಪ್ರಯಾಣ ಮಾಡಲೂ ಸಹ ನಿಜವಾದ ಸ್ವಾತಂತ್ರ್ಯ ಸಿಕ್ಕಿಲ್ಲ ಎನ್ನುವುದಕ್ಕೆ ಸಮೀಕ್ಷೆಗೆ ಹೋಗುವಾಗ ನಡೆದ ನನ್ನದೇ ಉದಾಹರಣೆ : ನಾನು ಚಿತ್ರದುರ್ಗದಿಂದ ದ್ಯಾವರನಹಳ್ಳಿಗೆ ಶ್ರೀನಿವಾಸ ಮೋಟಾರ್ ಸರ್ವಿಸ್ ಎಂ.ವೈ.ಯು.4364ನೇ ನಂಬರ್ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದೆ. ಆಗ ಚಳ್ಳಕೆರೆಯನ್ನು ಬಿಟ್ಟು ಮುಂದೆ ಚಲಿಸಿದಾಗ ನಾನು ದ್ಯಾವರನ ಹಳ್ಳಿಗೆ ಎಂದು ತಿಳಿದು 'ಕಂಡಕ್ಟರ್ ನನ್ನನ್ನು ಸೀಟು ಬಿಟ್ಟು ಮೇಲೇಳಲು ಬಲತ್ಕರಿಸಿದ. ಇದರಿಂದ ದ್ಯಾವರಹಳ್ಳಿಯ ಹರಿಜನರಿಗೆ ಆಗುತ್ತಿರುವ ಕಿರುಕುಳ ಅರ್ಥವಾಗಬಹುದು.

## ಮುತ್ತು ಮಾತಿನ ನಾಗರ

ಅಪಘಾತ !
ಮಾನಭಂಗ ! ಕೊಲೆ !
ಇದ್ದದ್ದೆ ಹಳೇ ಹಳಸಲು ಸುದ್ದಿ.

ಸರ್ಕಸ್ಸಲ್ಲಿ ಸುಟ್ಟು
ಬೂದಿಯಾಗುಳಿದ ಮೂಳೆಗೆ
ಅಂಟಿದ್ದ ಉಂಗುರವನ್ನೋ, ವಾಚನ್ನೋ
ಚೆಲ್ಲಿದ ಪುಡಿಗಾಸನ್ನೋ
ಕೆದಕಿ ಕೆದಕಿ ಹುಡುಕುತ್ತಿದ್ದ
ರಣಹದ್ದುಗಳ ನಡುವೆ ಈ ಸುದ್ದಿ !

ಸುದ್ದಿಯ ಕೇಳಿದ
ನಮ್ಮನಾಳುವವರು
ಕಂಬನಿಗರೆದು (?)
ಸದನವ ಮುಂದೂಡಿದರಂತೆ
ಇದೂ ಸುದ್ದಿ !

ಪಾಪ ! ಕಳ್ಳ ಬಟ್ಟಿ ಕುಡಿದು ಗೊಟಕ್
ಎಂದೋರಷ್ಟೇ ಪ್ರಜೆಗಳಿಗಲ್ಲ
ಅವರು ಪ್ರಭುಗಳು
ನಾಳೆಯ ಆಸೆ ಹೊತ್ತು
ಸುಟ್ಟ ಸರ್ಕಸ್ ಡೇರೆಯಡಿ
ಮಣ್ಣು ಕೆದಕುತ್ತಿದ್ದ
ರಣ ಹದ್ದುಗಳಿಗೂ ಪ್ರಭುಗಳು !

ಇನ್ನೇನು ಮಾಡಿಯಾರು ? !
ಸತ್ತವರಿಗೆ ಸಾವಿರವಂತೆ
[ಉಳಿದವರಿಗೆ ನಾಳೆಯ ಕಳ್ಳ ಬಟ್ಟಿಗೆ]
ಸುಲ್ತಾನನ ಶೋಧನೆಯಂತೆ,
ಇತ್ಯಾದಿ, ಇತ್ಯಾದಿ............ಸುದ್ದಿ....!

ನಾಳೆಯ ಕಾಣಬೇಕೆಂದ
ನನ್ನವರು ರಣಹದ್ದುಗಳಾದರು
ಗಾಳಿಗೇ ಅಲುಗುತ್ತಿದ್ದ
ಬಡಗುಡಿಸಲ ಗರಿಗಳು
ಕಳ್ಳ ಬಟ್ಟಿಯಲ್ಲಿ
ತೇಲಿ ಮುಳಗಿದೊ

ಸುಲ್ತಾನನ ಸಲಹಿ
ಬಡಗುಡಿಸಲ ಪುಡಿಗಾಸಿಗೆ
ಕಳ್ಳ ಬಟ್ಟಿ ಕುಡಿಸಿ
ತಾವು! ಅರಮನೆಯ ರಾಜರಾದರು
ಫಾರಿನ್ ವಿಸ್ಕಿ; ರಮ್‌ಗಳ
ಪ್ರಿಯರಾದರು.

ನನ್ನ ದಲಿತರ
ಪ್ರಾಣಕೆ ಬೆಲೆ ಕಟ್ಟುವ
ಮುತ್ತು ಮಾತಿನ
ವಿಷದ ನಾಗರಗಳ....
ನಾಲಗೆಯ ಮೆಟ್ಟಿ ಹಿರಿವ
ಆ ಕೆಂಪುದಿನ ಕಾಣಬೇಕು.
ಆ ಸುದ್ದಿ ಕೇಳಬೇಕು.

● ಜನಕರಾಜ

(ಇಂಥದೇ ಸಮಸ್ಯೆ ಅನ್ಯಾಯ ಸಂಬಂಧಿಯಾದ ಹಳ್ಳಿಗಾಡಿನ ಸ್ಥಿತಿಗತಿಯ ಬಗ್ಗೆ ಬರೆದು ಕಳಿಸುವ ಸಮೀಕ್ಷೆಗಳನ್ನು ಪಂಚಮವು ಪ್ರಕಟಿಸುವುದು. ಸಂ.)

# ಡಾ.ಚಿದಾನಂದಮೂರ್ತಿ ಜೊತೆಯಲ್ಲಿ ಗತಕಾಲಕ್ಕೆ

ಪಂಚಮ : ಶಾಸನಗಳಲ್ಲಿ ಅಸ್ಪೃಶ್ಯರ ಬಗ್ಗೆ ಏನೇನು ಪ್ರಸ್ತಾಪ ಬರುತ್ತದೆ?

ಡಾ. ಚಿದಾನ : ಬಂದಿರೋದು ಬಹಳ ಕಡಿಮೆ. ಶಾಸನಗಳಲ್ಲಿ ರಾಜ ಮಂತ್ರಿ ಅಧಿಕಾರಿಗಳಂಥವರ ವಿಚಾರವೆ ತುಂಬಿವೆ. ಶಾಸನಗಳಲ್ಲಿ–ಅಸ್ಪೃಶ್ಯರಿಗೆ ತೆರಿಗೆ ಹಾಕಿದ ವಿಷಯ ಬರುತ್ತದೆ. ಊರಿನ ವರ್ಣನೆ ಮಾಡುವಾಗ ಊರಿಂದ ಹೊರಗಡೆ ಹೊಲೆಯರ ಮನೆಗಳು ಎಂಬಂಥ ಉಲ್ಲೇಖ ಗಳು ಬರುತ್ತವೆ.

ಮುಂದೆ, ದಾನಗಳನ್ನು ಅಪಹರಿಸಿದವರು ಹೊಲೆಯರಾಗಿ ಹುಟ್ತಾರೆ ಅಥವಾ ಹೊಲೆಯರಿಗೆ ಸಮಾನ, ಇಂಥವರು ಸತ್ತರೆ ಹೊಲೆಯ ಸತ್ತಂಗೆ, ನಾಯಿ ಸತ್ತಂಗೆ, ಹಂದಿ ಸತ್ತಂಗೆ ಅಂತ ಹೇಳಿರುವ ಮಾತುಗಳು ಬರುತ್ತದೆ. ಅಂದರೆ ಅಸ್ಪೃಶ್ಯರ ಪ್ರಾಣಕ್ಕೆ ಬೆಲೆಯೇ ಇಲ್ಲ ಎಂಬರ್ಥ ದಲ್ಲಿ ಈ ಬಗ್ಗೆ ಉಲ್ಲೇಖವಿದೆ.

ಪಂಚಮ : ಶಾಸನದಲ್ಲಿ ಈ ರೀತಿಯಾಯ್ತು. ಇನ್ನು ಹಳೆಕಾವ್ಯದಲ್ಲಿ?

ಡಾ. ಚಿದಾನ : ಕಾವ್ಯಗಳಲ್ಲಿ ಹೊಲೆಯರ ವರ್ಣನೆ ಬರುತ್ತದೆ. ಹೊಲೆ ಯರ ಮೇಳಾಪ ಅಂತ ಬರ್ತದೆ. ಹೊಲೆಯರ ಹಾಡು ಗಳು ಮಾತುಗಳು ಹುಲ್ಲಿಗೆ ಹಚ್ಚಿದ ಬೆಂಕಿಯಂತೆ ಏನೂ ಆಗುವುದಿಲ್ಲ ಎಂಬ ಗಾದೆ ಮಾತಿದೆ.

ಹಾಗೇ 'ಸಂಬೋಳಿ' ಎಂಬ ಮಾತಿದೆ. ಅಂದರೆ ಅದರರ್ಥ ಅಸ್ಪೃಶ್ಯ ಅಂತಲೆ. ಹಿಂದೆ ಊರಿನ ಒಳಕ್ಕೆ ಅಸ್ಪೃಶ್ಯ ಬರುವಂತಿರಲಿಲ್ಲ. ಅನಿವಾರ್ಯವಾಗಿ ಏನಾರು ಬರಲೇ ಬೇಕಿದ್ದರೆ ಅವರು ಕೋಲಿನ ತುದಿಗೆ ಗೆಜ್ಜೆ ಸಿಕ್ಕಿಸಿ ಆ ಕೋಲನ್ನು ನೆಲಕ್ಕೆ ಕುಟ್ಟುತ್ತ ಸಂಬೋಳಿ ಸಂಬೋಳಿ ಎಂದು ಕೂಗ್ತ ಬರಬೇಕಿತ್ತು. ಅಸ್ಪೃಶ್ಯರನ್ನು ಸಂಬೋಳಿ ಗಳಂತಲೇ ಕರೆಯುತ್ತಿದ್ದರು. ಉದಾಹರಣೆಗೆ ಶಿವಭಕ್ತ ಸಂಬೋಳಿ ನಾಗಿದೇವ ಕವಿ ಅಸ್ಪೃಶ್ಯರವನು.

ಜೈನ ಗ್ರಂಥಗಳಲ್ಲೂ ಕೂಡ, ಪಾಪ ಮಾಡಿದವರು ವಿಕಾರ ರೂಪಿಗಳಾಗೂ, ರೋಗಿಗಳಾಗೂ, ಪ್ರಾಣಿ ಗಳಾಗೂ, ಹೊಲೆಯರ ಮನೆಯ ಹೆಣ್ಣಾಗಿ, ಆಡಾಗಿ ಹುಟ್ತಾರೆ ಎಂಬ ಮಾತುಗಳು ಬರುತ್ತವೆ.

ಪಂಚಮ : ಹಿಂದಿನ ಕಾಲದಲ್ಲಿ ಅಸ್ಪೃಶ್ಯರನ್ನು ಯಾವ ಯಾವ ಹೆಸರಿನಿಂದ ಕರೆಯುತ್ತಿದ್ದರು ತಿಳಿಸ್ತೀರಾ?

ಡಾ. ಚಿದಾನ : ಅನಾಮಿಕ, ಪಂಚಮ ಮುಂತಾಗಿ ಕರೆಯುತ್ತಿದ್ದುದು ತಿಳಿದು ಬರುತ್ತದೆ. ಪಂಚಮ ಅನ್ನೋದು ಸಂಸ್ಕೃತಶಬ್ದ. ಅಂದರೆ ಐದನೆಯವನು ಎಂದರ್ಥ. ಆದರೆ ಸಂಸ್ಕೃತದಲ್ಲಿ ಪಂಚಮ ಅನ್ನುವುದಕ್ಕೆ ಅಸ್ಪೃಶ್ಯ ಎಂಬ ಅರ್ಥವಿಲ್ಲ. ಕನ್ನಡ ಭಾಷೆಯಲ್ಲಿ ಪಂಚಮಕ್ಕೆ ಅಸ್ಪೃಶ್ಯ ಎಂಬರ್ಥದ ವಿಶೇಷ ಬೆಳವಣಿಗೆ ಆಗಿರುವಂತೆ ಕಾಣುತ್ತದೆ.

ಆಮೇಲೆ, ಅನಾಮಿಕ ಅಂದರೆ ಹೆಸರಿಲ್ಲದವನು ಎಂದರ್ಥ. ಹೆಸರಿಗೆ ಅನರ್ಹ, ಹೆಸರು ಅನಗತ್ಯ. ಸವರ್ಣೀಯರ ಬಾಯಿಗೆ ಬಂದದ್ದೆ ಅಸ್ಪೃಶ್ಯರಿಗೆ ಹೆಸರು. ಹಿಂದಿನ ಪುರಾತನ ಗ್ರಂಥಗಳಲ್ಲಿ ಬ್ರಾಹ್ಮಣರಾದರೆ ಇಂತಿಂಥ ಹೆಸರು ಇಡಬೇಕು ಅಂತ್ಯೇಳಿ ಸ್ಪಷ್ಟವಾಗಿ ಬರೆದಿಟ್ಟಿ ರುವರು. ಅಲ್ಲದೆ ಇಂತಿಂಥ ಬಟ್ಟೆ, ಇಂತಿಂಥ ಬಣ್ಣ ಮುಂತಾಗೂ ವಿವರಿಸಿರುವರು. ಹದಿನೆಂಟು ಸಾಂಪ್ರ ದಾಯಿಕ ಜಾತಿ ಹೇಳುವಾಗ ಬ್ರಾಹ್ಮಣನಿಂದ ಆರಂಭಿಸಿ ಹೊಲೆಯ, ಮಚ್ಚಿಗ, ಮಾದಿಗನವರೆಗೆ ಹೇಳುತ್ತಾರೆ.

ಪಂಚಮ : ಅಸ್ಪೃಶ್ಯರು ಅಭಿಮಾನ ಪಟ್ಟುಕೊಳ್ಳುವಂಥ ಹೆಸರು ಗತಕಾಲದಲ್ಲಿ ಇರಲೇ ಇಲ್ವಾ ಸಾರ್?

ಡಾ. ಚಿದಾನ : ಇದೆ, ಒಂದು ಕಡೆ ಬರುತ್ತೆ. ತುಂಬಾ ಆಸಕ್ತಿ ಕೆರಳಿ ಸುವ ಇನ್ನೊಂದು ಪದ—ತುಟಿಲಾಳ್ ಎಂಬುದು ಶಬ್ದಮಣಿ ದರ್ಪಣದಲ್ಲಿ ಕೇಶಿರಾಜ ಅರ್ಥ ಕೊಡುತ್ತಾನೆ ತುಟಿಲ್ ಅಂದರೆ ಸಾಹಸ. ತಟಿಲಾಳ್ ಅಂದರೆ ಸಾಹಸಿ. ಈ ಪದಕ್ಕೇನೆ ಇನ್ನೊಂದು ಅರ್ಥ ಕೊಟ್ಟಿ ರುವುದೇನೆಂದರೆ—ಅಸ್ಪೃಶ್ಯ ಅಂತ. ಆ ಕಾಲದಲ್ಲಿ ಕದನಗಳಲ್ಲಿ ಹೋರಾಡುತ್ತಿದ್ದವರು ಸಾಹಸಿಗಳಾಗಿದ್ದ ವರು ಕೆಳವರ್ಗದ ಜನರೇ ಎಂದು ಈ ಪದ ಸಾಕ್ಷಿ ನುಡಿ ಯುತ್ತದೆ.

ಪಂಚಮ : ವಚನ ಯುಗಕ್ಕೆ ಬಂದರೆ ಅಲ್ಲಿ ಅಸ್ಪೃಶ್ಯರನ್ನು ಕಾಣು ತ್ತಿದ್ದ ಬಗ್ಗೆ ಹೇಳ್ತೀರಾ?

ಡಾ. ಚಿದಾನ : ವಚನ ಕಾಲದಲ್ಲಿ ಅಸ್ಪೃಶ್ಯ ಶಿವಭಕ್ತರನ್ನು 'ಹಿರಿಯ ಮಹೇಶ್ವರರು' ಅಂತಲೇ ಕರೆಯುತ್ತಿದ್ದರು. ಉಳಿದ ಸವರ್ಣೀಯ ಶಿವ ಭಕ್ತರು 'ಮಹೇಶ್ವರರು' ಮಾತ್ರ.

ಪಂಚಮ : ಈಗ ಅಸ್ಪೃಶ್ಯರನ್ನು ಹರಿಜನರು ಅನ್ನುವಂತೆ ಆಗಲೂ?

ಡಾ. ಚಿದಾನ : ಹೌದು ಹೆಚ್ಚು ಕಮ್ಮಿ ಹಾಗೇನೆ. ಆದರೆ ಅಸ್ಪೃಶ್ಯರ ಒಡನಾಟ ಓಡಾಟ ಹೆಚ್ಚುತ್ತದೆ. ಬಸವಣ್ಣ ಬಂಢಾರಿ ಆದ ಮೇಲೆ ಸಂಬೋಳಿ ಎಂದು ಕೂಗ್ತ ಬರುವುದನ್ನು ಅಸ್ಪೃಶ್ಯರು ಕೈ ಬಿಡುವುದನ್ನು ಸಹಿಸದ ಹಾರುವರು ಬಿಜ್ಜಳನಿಗೆ ಚಾಡಿ ಹೇಳುವ ಉಲ್ಲೇಖವಿದೆ.

ಪಂಚಮ : ಆಗಿನ ಕಾಲದಲ್ಲಿಯೇ ಕಟ್ಟುಕಟ್ಟಳೆ ವಿರುದ್ಧ ವಚನ ಕಾರರು ಸೆಣಸಿದರು ಅಂದುಕೊಳ್ಳಬಹುದಲ್ಲ?

ಡಾ. ಚಿದಾನ : ಖಂಡಿತವಾಗೂ; ಮಾದರ ಚೆನ್ನಯ್ಯನ ರಗಳೆಯಲ್ಲಿ ಮೊದಲು ಒಂದು ಸಂಸ್ಕೃತ ವೃತ್ತ ಬರುತ್ತದೆ. ವಸ್ತು ಕೂಡ ಸಾಮಾಜಿಕ ಕಟ್ಟಳೆಗಳನ್ನು ಮೀರುವುದೇ ಆಗಿದೆ. ಮಾದರ ಚೆನ್ನಯ್ಯನ ಮನೆಯಲ್ಲಿ ಶಿವ ಅಂಬಲಿ ಕುಡಿ ದಿದ್ದರಿಂದ ಸಾವಿರಾರು ವರ್ಷಗಳಿಂದಲೂ ಬಂದಿದ್ದ ಆಗಮ ಶಾಸ್ತ್ರ ಪುರಾಣಗಳೆಲ್ಲ ಒಂದು ಕ್ಷಣದಲ್ಲಿ ನುಚ್ಚು ನೂರಾದವು ಎಂದಿದೆ, ಇಲ್ಲಿ ಹರಿಹರ ಕವಿ ಈ ಸಂಸ್ಕೃತ

ಮುಂದಿನ ಪುಟಕ್ಕೆ

# ಹುಟ್ಟಿನಲ್ಲೇ ಸಾವು ಕಂಡವರು

ಕಣ್ಮರೆಯಾದ ಕೆಂಪಣ್ಣನ ನೆನಪು ಹೊಟ್ಟೇಲಿ ಖಾರ ಕಿವುಚಿದಂತಾಗುತ್ತಿತ್ತು. ಆ ಹೊತ್ತಿಗೆ ಹಟ್ಟಿಯಲ್ಲಿ ಬರೆದ ಚಿತ್ತಾರದಂಗೆ ಕಣ್ಣಿಗೆ ಕಟ್ಟಿದ್ದು: ರಾತ್ರಿಯನ್ನು ನುಂಗಿ ಅರಗಿಸಿಕೊಂಡ ಜನ ಬೀದಿಗಳಲ್ಲಿ ಸುಳಿದಾಡುವ ಸಮಯ. ಅಲ್ಲೊಂದು ಸೇತುವೆಯ ಪಕ್ಕದಲ್ಲಿದ್ದ ಒಂದು ಗುಂಡಿಯ ಸುತ್ತ ಚಿಕ್ಕವರು ದೊಡ್ಡವರೆನ್ನದೆ ರೌಂಡಾಗಿ ನಿಂತಿದ್ದರು. ಗುಂಡಿಯ ಪಡದಲ್ಲಿ ಹಸುರಾಗಿ ಚಿಗುರಬೇಕಾಗಿದ್ದ ಸುಂಟಿಗರಿಕೆಯನ್ನು ಹಂದಿ ಕುನ್ನಿಗಳು ಗೆಡ್ಡೆ ಸಮೇತ ಘೂಟಹಾಕಿ ಗುಂಡಿಯ ನೀರಿನಲ್ಲಿ ಬಿದ್ದು ಹೋದ್ಲಾಡಿ ಹೋಗುತಿದ್ದವು. ಸಮಾಜ ಕಲ್ಯಾಣ ಇಲಾಖೆಯಿಂದ ನಡೆಸುವ ಹುಡುಗ ಹುಡುಗಿಯರ ಹೈಸ್ಕೂಲ್ ಹಾಸ್ಟೆಲ್ ಹತ್ತಿರದಲ್ಲೇ ಇದ್ದುದರಿಂದ ಅರ್ಧ

## ಕತ್ತಲೊಡನೆ ಮಾತುಕತೆ

ದಷ್ಟು ಮಕ್ಕಳು ವಾರ್ಡನ್‌ಗೆ ಚಳ್ಳೆಣ್ಣೆ ಹಿಕ್ಕಿ ಅಲ್ಲಿಗೆ ಬಂದಿದ್ದರು. ಬಂದು ಬಹಳ ಹೊತ್ತಾದ್ದರಿಂದಲೋ ಏನೋ; 'ವಾರ್ಡನ್ ಬೈಯ್ತಾರೆ ಬರ್ರಲಾ ಹೋಗನಾ' ಎಂದು ಒಬ್ಬ ಅಂದರೆ, 'ಬೈದ್ರೆ ಬೈತರೆ ಇರ್ರಲಾ' 'ಮಾನೀಟ್ರು ಇಲ್ಲಿಲ್ವ' ಎಂದು ಇನ್ನೊಬ್ಬ ಬಾಯಿ ಮುಚ್ಚಿಸುತ್ತಿದ್ದ. ಬರ್ರೀಯಮ್ಮ ಹೋಗ್ತಾನ' ಅನ್ನುತ ನ್ಯೆ ಕೈ ಚಿಗುಟುವುದು ಪಿಸುಗುಟ್ಟುವುದು ಒಂದೇ ಮಾಡಿಕೊಂಡು ಹೆಣ್ಣು ಮಕ್ಕಳು ಅಲ್ಲೆ ಜಗ್ಗಾಕುತ್ತಿದ್ದರು. ಮೊಣಕಾಲುದ್ದ ಬಗ್ಗಡದ ನೀರಿನಲ್ಲಿ ಪ್ಲಾಸ್ಟಿಕ್ ಗೊಂಬೆಯಂತೆ ಅಂಗತಾರಾಗಿ ತೇಲುತ್ತಿದ್ದ ಒಂದು ವಸ್ತು ನೋಡುವವರ ಕಣ್ಣಿನಲ್ಲಿ ತಟಗುಟ್ಟಿ ಮೈಯಲ್ಲಿ ರಕ್ತವಾಗಿ, ಬೆವರಾಗಿ ಹರಿದಿತ್ತು.

ಅದೊಂದು ಗಂಡುಮಗು ಹುಟ್ಟಿದ ಕೆಲವೇ ಗಳಿಗೆಗಳ ನಂತರ ಯಾರೋ ತಂದು ಎಸೆದಿದ್ದರು. ಬಣ್ಣ ಬಿಳಚಿಕೊಂಡಿತ್ತು. ಪುಟ್ಟ ಕೈ ಕಾಲುಗಳು ನಿಗತು ಕೊಂಡಿದ್ದರೆ ಬೆರಳುಗಳು ಸುರಳಿಯಂತೆ ಮಡಚಿಕೊಂಡಿದ್ದವು. ಕಣ್ಣುಗಳು ಅನಾಮತ್ತು ಮುಚ್ಚಿದ್ದರೂ ತೆರೆದ ಬಾಯಿ ತೆರೆದಂತೆ ಇತ್ತು. ಆ ಬಾಯೊಳಕ್ಕೆ ಇಣುಕಿ ನೋಡಿದರೆ ಮಾತು ಮರೆತುಕೊಂಡು, ಗಂಟಲೊಳಗೆ ಸಿಕ್ಕಿಕೊಂಡಿದ್ದ ಚಿಕ್ಕನಾಲಿಗೆ ಕಂಡಿತು. ತಾಯಿಯ ಮೊಲೆ ಕಚ್ಚುವ ಸೌಭಾಗ್ಯ ಕಳೆದುಕೊಂಡು ತುಟಿಗಳು ಎರಡು ಮಾಂಸದ ಚೂರುಗಳಾಗಿದ್ದವು. ಹೊಟ್ಟೆಯಿಂದ ಹೊರಟ ಹೊಕ್ಕಳು ಬಳ್ಳಿ ಬಲ ಭುಜದ ಮೇಲಿಂದ ಬಂದು ಕುತ್ತಿಗೆಗೆ ಸುತ್ತಿಕೊಂಡಿತ್ತು.

ಇದು ಸೇದೋ ಬಿಂದಿಗೆಯ ಕುತ್ತಿಗೆ ಜೀರಿದ್ದ ತೆಂಗಿನ ಹಗ್ಗದಂತೆ ಸ್ಪಷ್ಟವಾಗಿತ್ತು. ಈ ತರವಾಗಿ ತೇಲುತ್ತಿದ್ದ ಮಾಂಸದ ಮುದ್ದೆಯನ್ನು ರುಚಿಸಲು ಮೂರುನಾಲ್ಕು ನಾಯಿಗಳು ನಿಂತಿದ್ದವರ. ಕಾಲಸಂದಿಯಿಂದ ನುಗ್ಗಲು ಪದರಗುಟ್ಟುತಿದ್ದವು. ಆದರೆ, ಹುಡುಗರು 'ಏ ಕುರೋ' ಎಂದು ಗದರಿ ಕಲ್ಲೆಸೆದು ದೂರ ಕಳಿಸುತ್ತಿದ್ದರು. ಅದು ಮಕ್ಕಳು ಮತ್ತು ನಾಯಿಗಳ ನಡುವಿನ ಒಂದು ಸಣ್ಣ ಹೋರಾಟ ಅನ್ನಬಹುದು. ಅಲ್ಲಿದ್ದ ದೊಡ್ಡವರ ನಾಲಿಗೆಗೆ ಹಿಡಿತ ಇರಲಿಲ್ಲ. ಹೆಂಗಸರು: "ಯಾರೋ ಕಾಣೆ ಊರ್ ದೆಂಗಿದ ಮುಂಡೆ ಬಂಗಾರದಂಥ ಗಂಡುಮಗ ಕಿತ್ತು. ನೀರ್ಗೆಸ್ತವಳೆ, ದೆಂಗಿಸ್ಕಣವಾಗ ಚೆನ್ನಾಗಿತ್ತ?' ಗಂಡಸರು ಗತ್ತಿನಿಂದ "ಯಾವಳೋ ಕೆಟ್‌ಲಾಡಿ ಕದ್ ಬಸ್ರಾಗವಳೆ, ಹುಟ್ಟೊವೆಸ್ಟೊ ಸಾಯುವೆಸ್ಟೊ ಯಾರಾನ ಫಣ್ ಮಾಡಿ ಹಾಲು ತುಪ್ಪ ಬಿಡಿ, ಇಲ್ದಿದ್ರೆ ಹದ್ದುಕಾಗೆ ಪಾಲು''ಅಂದುಕೊಂಡು ಒಬ್ಬೊಬ್ಬರು ಒಂದೊಂದು ಕಿಡಿಯಾಗಿ ಬಯಲಾದರು. ಖಾಲಿಯಾದವರ ಜಾಗ ತುಂಬಲು ಇನ್ನೂ ಜನ ಬರುತ್ತಿದ್ದರು. ನಾಯಿ ಮತ್ತು ಮಕ್ಕಳ ಮಧ್ಯದ ತಕರಾರು ಮುಗಿದಿರಲಿಲ್ಲ.

ಆ ರಾತ್ರಿ ಕಣ್ಣು ಮುಚ್ಚಲು ನನ್ನಿಂದಾಗಲಿಲ್ಲ. ಒಂದುತರ ಕಳಸೊಕ್ಕಿದಂಗೆ. ಏನಾದ್ರೂ ಮಾಡನ ಅಂದ್ರೆ ಕೈಯೂ ಬರಲಿಲ್ಲ. ಈ ನಾಡಿನ ದಲಿತರು ಇಷ್ಟೇ ಅನ್ನಿಸಿತು. ಈ ನೆಲದಲ್ಲಿ ಬೇರುಬಿಟ್ಟು ಚಿಗುರೊಡೆಯಬೇಕಾದ ಜನ ಭೂಗರ್ಭದಲ್ಲೇ ...

● ಕೇಬಿ.

---

ವೃತ್ತದ ಛಂದಸ್ಸಿನ ಕಟ್ಟಳೆ ಮೀರಿ ಸಾಮಾಜಿಕ ಕಟ್ಟಳೆ ಮೀರುವುದ ಉದ್ದೇಶಪೂರ್ವಕವಾಗಿ ಹೇಳುತ್ತಾನೆ. ಇದೇ ಕಾವ್ಯದಲ್ಲಿ ಮಾದಾರ ಚೆನ್ನಯ್ಯನ ಮನೆಯಲ್ಲಿ ಅಂಬಲಿ ಕುಡಿದು ತೃಪ್ತಿಯಾದ ಶಿವನು ಚಕ್ರವರ್ತಿ ಮನೆಯಲ್ಲಿ ಏನೂ ತಿನ್ನದಿದ್ದಾಗ ಕಾರಣ ತಿಳಿದ ಚಕ್ರವರ್ತಿಯು ಮಾದರ ಚೆನ್ನಯ್ಯನ ಪಾದತಲಕ್ಕೆ ಕಿರೀಟ ವಿಟ್ಟು ತನ್ನ ಸರ್ವಾಂಗವನ್ನು ಭೂಮಿಗೆ ಇಳಿಸಿ ನಮಸ್ಕರಿಸುವ ಅಪೂರ್ವ ಪ್ರಸಂಗ ಬರುತ್ತದೆ.

ಪಂಚಮ : ಹಾಗೆ ಹಿಂದುಳಿದ ಜನಾಂಗದವರ ವಚನಗಳಲ್ಲಿ ಏನಾರು ಹೇಳಿಕೊಳ್ಳುವಂಥ ಭಿನ್ನತೆ ಕಾಣಿಸುತ್ತ?

ಡಾ. ಚಿದಾನ : ಕೆಲವರ ವಚನಗಳಲ್ಲಿ 'ನಾವು ಹೊಲೆಯರಲ್ಲ, ರಕ್ತ ಮಾಂಸ ಬರಿಸದೆ ಸುಲಿಗೆ ಮಾಡಿ ಕೊಲ್ಲುವವರು ಹೊಲೆಯರು' ಎಂಬ ಮಾತು ಬರುತ್ತದೆ. ಎಲ್ಲ ವಚನಕಾರರ ಕೇಂದ್ರ ಶಿವ ಅಥವಾ ಭಕ್ತಿಯೇ. ಇದರ ಸುತ್ತಮುತ್ತ ಸಾಮಾಜಿಕ ಸಮಾನತೆಗೆ ತುಡಿತ ಕಂಡುಬರುತ್ತದೆ. ಹಾಗೇನೆ ಅಂಬಿಗರ ಚೌಡಯ್ಯನ ವಚನದಲ್ಲಿ 'ಎಡಗಾಲ ಎಕ್ಕಡ ತೆಗೆದು ಮುದ್ದು ಮುಖದ ಮೇಲೆ ಹೊಡೆ' ಎಂಬ ಆಕ್ರೋಶವಿದೆ.

# ಶೋಷಿತರ ಆಸೆಯ ಹುಟ್ಟು: ದಲಿತ ಸಂಘರ್ಷ ಸಮಿತಿ

ದಲಿತ ಸಂಘರ್ಷ ಸಮಿತಿ ಕರ್ನಾಟಕ ಮಾತ್ರವಲ್ಲ, ಭಾರತದ ವಿವಿಧ ಪ್ರಾಂತ್ಯಗಳ ಶೋಷಿತಜನರ ಕುತೂಹಲವನ್ನು ಕೆರಳಿಸಿದೆ. ಕೆಲವು ಅಧ್ಯಯನ ತಂಡಗಳು ಅದರ ಸ್ವರೂಪ ತಿಳಿಯಲು ಯತ್ನಿಸಿವೆ. ದ.ಸಂ.ಸ. ಇದುವರೆಗೂ ನಡೆಸಿರುವ ಹೋರಾಟಗಳಿಂದ ಅದು ಬಡವರ ಬೆನ್ನೆಲುಬು; ಜಾತಿಯಿಂದ ತುಳಿಯಲ್ಪಟ್ಟವರ, ಕೂಲಿ, ಕಾರ್ಮಿಕರ, ಶ್ರಮಜೀವಿಗಳ ಸ್ನೇಹಿತ ಎಂದು ಜನಪ್ರಿಯವಾಗಿದೆ. ಬಡವರ ಹಟ್ಟಿಗಳಲ್ಲಿ ಚಿಕ್ಕಮಕ್ಕಳಾದಿಯಾಗಿ "ಸಂಘದವರು ಬಂದಿದ್ರು ಮಾವ" ಎಂದು ಹಾಡುತ್ತಾರೆ. ಭೂ ಮಾಲೀಕರು, ಶ್ರೀಮಂತರು ಹಲ್ಲು ಕಡಿಯುತ್ತ ಇದು ದಲಿತರ ಸಂಘ ಅಲ್ಲ ದೈತ್ಯರ ಸಂಘ ಎಂದು ಕೆಂಡ ಕಾರುತ್ತಾರೆ. ಇಷ್ಟಾದರೂ ದ.ಸಂ.ಸ. ಏನು? ಅದರ ಹೋರಾಟದ ಸ್ವರೂಪ ಎಂಥಾದ್ದು? ಗುರಿ ಎಂಥಾದ್ದು? ಎಂಬ ಬಗ್ಗೆ ಬಹಳ ಜನರಲ್ಲಿ ಅನುಮಾನ ಗೊಂದಲಗಳಿವೆ. ಅದರ ಸ್ಪಷ್ಟನೆ ಇಂದು ಅಗತ್ಯವಿದೆ. ಮತ್ತು ಪ್ರಚಲಿತವಾಗಿ ದೇಶದಲ್ಲಿ ಉಂಟಾಗಿರುವ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಕ್ಷೋಭೆಯಿಂದ ಕಂಗಾಲಾಗಿ ದಿಕ್ಕುತಪ್ಪಿರುವ ಶ್ರಮಜೀವಿಗಳನ್ನು ಸಮಗ್ರ ಬಿಡುಗಡೆಯತ್ತ ಸಂಘಟಿಸುವುದು ನಮ್ಮ ಗುರಿಯಾಗಿದೆ.

೧೯೭೦ರ ದಶಕ, ಭಾರತ ಹಲವಾರು ಉತ್ಕ್ರಮಣ, ಆಂದೋಲನಗಳನ್ನು ಎದುರಿಸಿದ ಕಾಲ. ಗುಜರಾತ್ ವಿದ್ಯಾರ್ಥಿಗಳು ಭ್ರಷ್ಟಾಚಾರದ ವಿರುದ್ಧ ದಂಗೆ ಎದ್ದು ಹಿತೇಂದ್ರದೇಸಾಯಿ ಮಂತ್ರಿ ಮಂಡಲದ ಸರ್ಕಾರವನ್ನು ಉರುಳಿಸಿದರು. ಅದುವರೆಗೂ ಸರ್ವೋದಯ ಕಾರ್ಯಕ್ರಮಗಳಲ್ಲಿ ಮಗ್ನರಾಗಿದ್ದ ಜೆ.ಪಿ. ಗುಜರಾತ್ ವಿದ್ಯಾರ್ಥಿ ಹೋರಾಟದಿಂದ ಪ್ರಚೋದಿತರಾಗಿ, ಭಾರತ ಪ್ರಜಾಪ್ರಭುತ್ವಕ್ಕೆ ಒಂದು ಹೊಸ ಕಾಯಕಲ್ಪ ನಿರ್ಮಿಸುವ ಕಡೆ ಮಗ್ನರಾದರು. ಜೆ.ಪಿ. ನಾಯಕತ್ವದಲ್ಲಿ ಬಿಹಾರ್ ವಿದ್ಯಾರ್ಥಿಗಳು ಅಂದಿನ ಗಫೂರ್ ಸರ್ಕಾರದ ವಿರುದ್ಧ ಬಂಡೆದ್ದರು. ನಿಧಾನಕ್ಕೆ ಚಳುವಳಿ ರಾಷ್ಟ್ರವ್ಯಾಪಿಯಾಗತೊಡಗಿತು.

ಬಿ. ಕೃಷ್ಣಪ್ಪ

ಯುವ ಜನಾಂಗದಲ್ಲಿ ಹೊಸ ರಕ್ತ ಸಂಚಾರವಾಗತೊಡಗಿತು. ದೇಶದ ವಿರೋಧ ಪಕ್ಷಗಳು ಜೆ.ಪಿ. ಯವರಲ್ಲಿ ಹೊಸ ನಾಯಕತ್ವವನ್ನು ಕಂಡುಕೊಂಡರು. ಭ್ರಷ್ಟ ಆಡಳಿತದ ಪ್ರತಿಮೂರ್ತಿ ಇಂದಿರಾ ಹಟಾವೊ ಚಳುವಳಿ ಆರಂಭವಾಯಿತು. ಅಲಹಾಬಾದ್ ಹೈಕೋರ್ಟ್‌ನಲ್ಲಿ ಇಂದಿರಾಗಾಂಧಿ ಆಯ್ಕೆ ಅನೂರ್ಜಿತವಾಯಿತು. ದೇಶದಲ್ಲಿ ತರ್ತುಪರಿಸ್ಥಿತಿ ಘೋಷಿತವಾಯಿತು. ಜೆ.ಪಿ, ಇತ್ಯಾದಿ ದೇಶದ ಪ್ರಮುಖನಾಯಕರನ್ನು ಬಂಧಿಸಿ ಸೆರೆಮನೆಗೆ ದೂಡಲಾಯಿತು. ಪತ್ರಿಕಾ ಸ್ವಾತಂತ್ರ್ಯ ಕಿತ್ತುಕೊಳ್ಳಲಾಯಿತು.

ಇದೇ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ಮತ್ತೊಂದು ಚಳುವಳಿ ನಡೆದಿತ್ತು. ಅಸ್ಪೃಶ್ಯರ ಮೇಲೆ ನಿರಂತರವಾಗಿ ನಡೆಯುತ್ತಿರುವ ಕೊಲೆ, ಸುಲಿಗೆ, ದಬ್ಬಾಳಿಕೆ, ಸ್ತ್ರೀಯರ ಮಾನಭಂಗ ಇತ್ಯಾದಿಗಳ ವಿರುದ್ಧ ಪ್ರತಿಭಟಿಸಿ ಅಲ್ಲಿನ ದಲಿತ ಯುವಕರು "ದಲಿತ್ ಪ್ಯಾಂಥರ್" ಸಂಘಟನೆಯಡಿಯಲ್ಲಿ ಚುರುಕಾಗಿ ಸಂಘಟನೆಯಾಗುತ್ತಿದ್ದರು. ಮುಂಬಯಿ ವಾರ್ಲಿ ಉಪಚುನಾವಣೆಯನ್ನು ಬಹಿಷ್ಕರಿಸುವುದರ ಮೂಲಕ ಅವರು ಆಳುವ ಪಕ್ಷಕ್ಕೆ ಚಳ್ಳೆ ಹಣ್ಣು ತಿನ್ನಿಸಿದರು. ಆಗ್ಗೆ ಅತ್ಯಂತ ಪ್ರಬಲವಾಗಿದ್ದ ಶಿವಸೇನೆಯನ್ನು ಬಗ್ಗು ಬಡಿದರು. ದಲಿತ ಪ್ಯಾಂಥರ್ ಸಂಘಟನೆ ಇಡೀ ರಾಷ್ಟ್ರದ ದಲಿತ ಯುವಕರ ಮನದಲ್ಲಿ ಕ್ರಾಂತಿಯ ಹೊಗೆಯಾಡಿಸಿತು.

ಮಹಾರಾಷ್ಟ್ರದಲ್ಲಿ ಹೀಗಾದರೆ ಕರ್ನಾಟಕದ ಸ್ಥಿತಿ ಮತ್ತೊಂದು ರೀತಿಯಾಗಿತ್ತು. ಅಂದಿನ ಅರಸು ಸರ್ಕಾರದ ಪೌರಾಡಳಿತ ಮಂತ್ರಿ ಬಿ. ಬಸವಲಿಂಗಪ್ಪ ಅಸ್ಪೃಶ್ಯರು ತಲೆಯ ಮೇಲೆ ಮಲ ಹೊರುವ ಪದ್ಧತಿಯನ್ನು ರದ್ದುಗೊಳಿಸಿದರು, ಹಿಂದೂ ದೇವರು ಜಾತಿಪದ್ಧತಿ ವಿರುದ್ಧ ದಂಗೆ ಎದ್ದರು. ಅಸ್ಪೃಶ್ಯರಿಗೆ ದೇವರ ಪಟಗಳನ್ನು ತಿಪ್ಪೆ ಘಟಾರಕ್ಕೆ ಎಸೆಯಿರಿ ಎಂದರು. ಅಸ್ಪೃಶ್ಯ ಯುವಕರಿಗೆ ಜಾತಿ ಪದ್ಧತಿ ವಿರುದ್ಧ ದಂಗೆ ಏಳಲು ಪ್ರಚೋದಿಸಿದರು. ಕರ್ನಾಟಕ ಜನಮನ ಕ್ಷೋಭೆಗೊಂಡಿತು. ಇಡೀ ಭಾರತದಲ್ಲೇ ಪ್ರಥಮವಾಗಿ ಬ್ರಾಹ್ಮಣ ವಿರೋಧಿ ಚಳುವಳಿಯನ್ನು ಸಮರ್ಥವಾಗಿ ನಡೆಸಿ ಯಶಸ್ವಿಯಾದ ತಮಿಳುನಾಡಿನ ಡಿ.ಎಂ.ಕೆ.ಯವರು ಬಸವಲಿಂಗಪ್ಪನವರ ಕೈಗೆ ಖಡ್ಗ ಕೊಟ್ಟು ಸನ್ಮಾನಿಸಿ ಹುರಿದುಂಬಿಸಿದರು. ಪರಿಣಾಮವಾಗಿ ಪೆರಿಯಾರ್ ಕರ್ನಾಟಕಕ್ಕೆ ಭೇಟಿ ಕೊಟ್ಟರು. ಆಗ ಕರ್ನಾಟಕದಲ್ಲಿ ಸಮಾಜವಾದಿ ಯುವಜನ ಸಭಾ ದೇವರು ಧರ್ಮ ಜಾತಿ ವಿರುದ್ಧವಾಗಿ, ಬ್ರಾಹ್ಮಣಶಾಹಿ ವಿರುದ್ಧವಾಗಿ ಸಮರ ಸಾರಿತ್ತು. ಮೈಸೂರಿನಲ್ಲಿ ಜಾತಿ ವಿನಾಶ ಸಮ್ಮೇಳನ ನಡೆದಿತ್ತು. ಸಮಾಜವಾದಿ ಯುವಜನ ಸಭಾದವರು ಕರ್ನಾಟಕದಲ್ಲಿ ಜೆ.ಪಿ. ಚಳುವಳಿ ಆರಂಭಿಸಿದ್ದರು.

ಬಸವಲಿಂಗಪ್ಪ ಆ ಕಾಲಕ್ಕೆ ಹಿಂದೂಗಳಿಗೆ ನಿಜವಾಗಿ ಗಂಡಾಂತರಕಾರಿಯಾಗಿ ಕಂಡರು. ಅವರನ್ನು ತುಳಿಯಲು ಮೇಲ್ಜಾತಿ ಶಕ್ತಿಗಳು, ಆರ್. ಎಸ್. ಎಸ್., ಮಠಾಧಿಪತಿಗಳು, ಬ್ರಾಹ್ಮಣಶಾಹಿ ಪತ್ರಿಕೆಗಳು ಒಂದಾದವು. ಕನ್ನಡ ಸಾಹಿತ್ಯ ಬೂಸ ಎಂಬ ಕಾರಣವನ್ನೊಡ್ಡಿ ಅವರನ್ನು ಮಂತ್ರಿಪದವಿಯಿಂದ ಕೆಳಕ್ಕೆ ಇಳಿಸಲು ಕರ್ನಾಟಕದ ಆದ್ಯಂತ ಚಳುವಳಿಗಳು ಆರಂಭವಾದವು. ಇದರ ಪರಿಣಾಮ ದಲಿತ ವಿದ್ಯಾರ್ಥಿಗಳ ಮೇಲೆ ಹಲ್ಲೆ, ಚೂರಿ ಇರಿತಗಳು ಮೊದಲಾದವು. ದಲಿತ ವಿದ್ಯಾರ್ಥಿಗಳು ಅಲ್ಲಲ್ಲೆ ಒಗ್ಗಟ್ಟಾಗ ತೊಡಗಿದರು. ಸಂಘಟಿತರಾಗತೊಡಗಿದರು. ಸಮಾಜವಾದಿ ಯುವಜನ ಸಭಾ ಬ್ರಾಹ್ಮಣಶಾಹಿ ಪತ್ರಿಕೆಗಳ ವಿರುದ್ಧ ಬಂಡೆದ್ದಿತು. ಕರ್ನಾಟಕ ಬರಹಗಾರರ ಕಲಾವಿದರ ಒಕ್ಕೂಟ ಸಂಘಟನೆಯಾಯಿತು. ಕೊನೆಗೂ ಬಸವಲಿಂಗಪ್ಪ ಅಧಿಕಾರದಿಂದ ಕೆಳಗೆ ಇಳಿಸಲ್ಪಟ್ಟರು. ಇದರ ಜೊತೆಗೆ ಬಸವಲಿಂಗಪ್ಪನವರ ಆಕ್ರೋಶ-ಕ್ರಾಂತಿಗಳೂ ಇಂಗತೊಡಗಿದವು. ಆದರೆ ಇಷ್ಟೊತ್ತಿಗಾಗಲೆ ಶತಮಾನಗಳಿಂದ ತಾಳಲಾರದ ನೋವನ್ನು ಹೊಟ್ಟೆಯಲ್ಲಿ ತಾಳಿಕೊಂಡಿದ್ದ ಕರ್ನಾಟಕದ ದಲಿತ ಯುವ ಶಕ್ತಿ ದಲಿತ ಸಂಘರ್ಷ ಸಮಿತಿಗೆ ತಳಪಾಯ ರೂಪಿಸಿಕೊಂಡಿತ್ತು.

# ಶೋಷಕರನು ನಡುಗಿಸಿದ ದಲಿತರ ಮೆರವಣಿಗೆ

ವರದಿ : ಎಂ. ವೆಂಕಟಸ್ವಾಮಿ

ಬೆಂಗಳೂರು: ಜುಲೈ12ರ ಬೆಳಿಗ್ಗೆಯೆ ಈ ಜಿಲ್ಲೆಯ ಚೂಡ ಸಂದ್ರ ಗ್ರಾಮಕ್ಕೆ ಪೋಲೀಸರ ಪಹರೆ ಧಾವಿಸಿಬಂದು ನೀಲಿವ್ಯಾನುಗಳು ಸುತ್ತ ಮುತ್ತಲಿನ ಹಳ್ಳಿಗಳಿಂದ ಕರಪತ್ರ ಹಿಡಿದು ಬರುತ್ತಿದ್ದ ಕರಿಜನರಿಗೆ ಭಯಪಡಿಸುವಂತೆ ನಿಂತಿದ್ದವು. ದಲಿತರ ಮೆರವಣಿಗೆ ಬೇಗ ಹೊರಡುವಂತೆ ಅವಸರಿಸುತ್ತಿದ್ದವು. ಹೋರಾಟದ ಹಾಡುಗಳನ್ನು ಪೋಲೀಸರ ಜೊತೆಗೆ ಊರಿನವರೆಲ್ಲಾ ಸುತ್ತುವರೆದು ಕೇಳುತ್ತಿದ್ದರು. ಆ ಹಳ್ಳಿಯಲ್ಲಿ ನೊಟ್ಟ ಮೊದಲ ಬಾರಿಗೆ ಇಂತಹ ಕಾರ್ಯಕ್ರಮವು ನಡೆಯುತ್ತಿತ್ತು.

ಮದ್ಯಾಹ್ನ ೧೨ ಗಂಟೆ ಉರಿ ಬಿಸಿಲಿನಲ್ಲಿ ಮುನ್ನೂರು ಜನರ ಮೆರವಣಿಗೆಯು ಊರ ಬಾಗಿಲಿಗೆ ಬಂದಾಗ ಕಾರ್ಯ ಕರ್ತ ಮುನಿಎಲ್ಲಪ್ಪ ಮೆರವಣಿಗೆ ಉದ್ದೇಶ ಸ್ಪಷ್ಟಪಡಿಸಿದರು. ಹೆಂಗಸರು ಮಕ್ಕಳೂ ಹೋರಾಟದ ಹಾಡುಗಳಿಗೆ ದನಿ ಗೂಡಿಸಿದ್ದರು. ಇನ್ನೂ ಕ್ರೂರ ಜೋಡಿದಾರಗಿರಿ ಮುಂದುವರೆಸುತ್ತಿರುವ ಬೆಂಗಳೂರು ಜಿಲ್ಲೆಯ ಹಾಲ ನಾಯಕನ ಹಳ್ಳಿ ಭೂಮಾಲೀಕರು ೧೯೬೮ರಲ್ಲಿ ದಲಿತರ ಮೇಲೆ ಹಲ್ಲೆ ನಡೆಸಿ ಊರು ಬಿಟ್ಟು ಓಡಿಸಿದ್ದು, ೧೯೭೮ರಲ್ಲಿ ಚೂಡ ಸಂದ್ರದ ತಿಮ್ಮರಾಯಪ್ಪನನ್ನು ಹಾಲನಾಯಕನ ಹಳ್ಳಿಯ ನಾಗರಾಜ ರೆಡ್ಡಿಯು ಮಚ್ಚಿನಿಂದ ಹೊಡೆದು ಕಾಲು ಕತ್ತರಿಸಿದ್ದು, ಜಮೀನುದಾರರು ದಲಿತರ ಮೇಲೆ ಸುಳ್ಳುಕೇಸಾಕುತ್ತಿದ್ದುದು, ದಲಿತರ ಜಮೀನನ್ನು ಅಕ್ರಮವಾಗಿಭೂಮಾಲೀಕರು ವಶಪಡಿಸಿ ಕೊಳ್ಳುತ್ತಿದ್ದುದೇ ಮುಂತಾದ ದೌರ್ಜನ್ಯಗಳ ಸರಮಾಲೆ ಪ್ರತಿಭಟಸುತ್ತ ಮೆರವಣಿಗೆಯು ಕಸುವಿನ ಹಳ್ಳಿ, ಕೆರಕೊಂಡ್ರಹಳ್ಳಿಗಳ ಮೂಲಕ ಸುಮಾರು ೫ ಮೈಲಿ ದೂರ ನಡೆದು ಜುನ್ನಸಂದ್ರಕ್ಕೆ ಕಾಲಿಟ್ಟಿತು.ಅಷ್ಟರಲ್ಲಿ ಜುನ್ನಸಂದ್ರದ ಊರ ಬಾಗಿಲಲ್ಲಿ ಅಡ್ಡಗೋಡೆಯಂತೆ ನಿಂತಿದ್ದ ಪೋಲೀಸರು ಮೆರವಣಿಗೆಯು ಮುಂದೆ ಹಾಲನಾಯಕನ ಹಳ್ಳಿಗೆ ಹೋಗದಂತೆ ತಡೆದಿದ್ದರು. ಅಡ್ಡಗೆರೆ ದಾಟದರೆ ಅರೆಸ್ಟು ಮಾಡುವುದಾಗಿ ತಿಳಿಸಿದರು. ಆ ಕಡೆ ಹಾಲನಾಯಕನ ಹಳ್ಳಿಯ ಸಾವುಕಾರರು ಬೇರೆ ಊರುಗಳಿಂದ ಜನರನ್ನು ಕರೆಯಿಸಿಕೊಂಡು ಕಲ್ಲು ದೊಣ್ಣೆ ಮಚ್ಚು, ಚಾಕು ಚೈನುಗಳನ್ನು ತಂದಿಟ್ಟುಕೊಂಡು ಸರ್ವೇ ತೋಪುಗಳಲ್ಲಿ ಗೂಂಡಾಗಳು ಕಾಯುತ್ತಿದ್ದಾರೆ ಮುಂತಾದ ಸುದ್ದಿಗಳಿದ್ದರೂ ಮೆರವಣಿಗೆಯು ಪೋಲೀಸರನ್ನು ಲೆಕ್ಕಿಸದೇ ಮುನ್ನುಗ್ಗಿತು. ಪೋಲೀಸ್ ಅಧಿಕಾರಿಗಳು"ಹಾಲ ನಾಯಕನ ಹಳ್ಳಿಯಲ್ಲಿ ನಿಮಗೇನಾದರೂ ಹೆಚ್ಚು ಕಡಿಮೆಯಾದರೆ ನಾವು ಜವಾಬ್ದಾರರಲ್ಲ, ಗಲಾಟೆಯಾಗುವ ಸಂಭವವಿದೆ. ನಿಮ್ಮ ಮೆರವಣಿಯನ್ನು ಇಲ್ಲಿಗೆ ನಿಲ್ಲಿಸಿ ಸಭೆ ನಡೆಸಿ,ನಾವು ಮುಂದೆ ಬಿಡುವುದಿಲ್ಲ" ಹೀಗೆಲ್ಲಾ ಬೆದರಿಸಿದರು. ತಾವು ಸತ್ತರೂ ಪರವಾಗಿಲ್ಲ ಹಾಲನಾಯಕನ ಹಳ್ಳಿಗೆ ಮೆರವಣಿಗೆ ಹೋಗಲೇಬೇಕೆಂದು ಸ್ಥಳೀಯ ಯುವಕರು ಪೋಲೀಸರೊಂದಿಗೆ ಹಠಮಾಡಿ ಹೊರಟು ಊರು ಹತ್ತಿರವಾಗುತ್ತಿದ್ದಂತೆ ಘೋಷಣೆಗಳು ಜೋರಾದವು. ಬಲಿತ ಭೂಮಾಲೀಕರ ಊರಿಗೆ ಮೆರೆವಣಿಗೆಯು ಕಾಲಿಟ್ಟಿತು. ಮಹಡಿಗಳ ಮೇಲೆ, ಕೆರೆಯ ಕಟ್ಟೆಯ ಮೇಲೆ ಊರ ಸುತ್ತಲೂ ಜನ ಮೆರವಣಿಯನ್ನು ಕಾದು ನೋಡುತ್ತ ಕೋಟೆಯಂತೆ ನಿಂತಿದ್ದರು. ನೂಕುನುಗ್ಗಲು ಹೆಚ್ಚಾಗಿತ್ತು. ಮೆರವಣಿಗೆಯು ಊರಿನ ಮಧ್ಯದಲ್ಲಿ ನಿಂತಾಗ ಆ ಊರಿನ ಜನರನ್ನು ಉದ್ದೇಶಿಸಿ ಎಂ.ಡಿ. ಗಂಗಯ್ಯ ಮಾತಾಡಿದರು. ಮಧ್ಯಾಹ್ನ ಮೂರು ಗಂಟೆಗೆ ಜುನ್ನಸಂದ್ರದಲ್ಲಿ ದ.ಸಂ.ಸ. ಕೊಲಾರ ಜಿಲ್ಲಾ ಸಂಚಾಲಕ ಸಿ.ಎಂ. ಮುನಿಯಪ್ಪ ಉದ್ಘಾಟನಾ ಭಾಷಣ ಮಾತಾಡಿದರು. ಚಿಕ್ಕಮಗಳೂರು ಜಿಲ್ಲಾ ದ.ಸಂ.ಸ. ಸಂಚಾಲಕ ಎಂ.ಡಿ ಗಂಗಯ್ಯ, ಕೋಲಾರದ ರಾಮಯ್ಯ ಮಾತಾಡಿದರು. ನೆರದಿದ್ದ ಮುಗ್ಧರಿಗೆಲ್ಲಾ ಧೈರ್ಯ ಉಂಟಾಗಿ ದಲಿತ ಸಂಘರ್ಷ ಸಮಿತಿಯ ಹೋರಾಟಕ್ಕೆ ಬೆಂಬಲವಾಗಿ ದನಿಗೂಡಿದರು.

ಕೆನರಾ ಬ್ಯಾಂಕ್, ಅಖಿಲ ಭಾರತ ಪರಿಶಿಷ್ಟ ಜಾತಿ-ಬುಡಕಟ್ಟು ನೌಕರರ ಸಂಘದ ಕೇರಳ, ಮಹಾರಾಷ್ಟ್ರ, ಮದ್ರಾಸ್, ದೆಹಲಿ ಒರಿಸ್ಸಾಗಳಿಂದ ಬಂದಿದ್ದ ಕಾರ್ಯದರ್ಶಿಗಳೂ ಈ ಮೆರವಣಿಗೆಯಲ್ಲಿ ಭಾಗವಹಿಸಿದ್ದರು.

# ನೆಲಮಾಕನಹಳ್ಳಿ ದಸಂಸ ಉದ್ಘಾಟನೆ

ವರದಿ : ದೊಡ್ಡಣ್ಣ

ಮಳವಳಿ ಜುಲೈ26: ಈ ತಾಲ್ಲೂಕಿನ ನೆಲಮಾಕನಹಳ್ಳಿಯಲ್ಲಿ ಪಿ.ಯು.ಸಿ. ಓದುತ್ತಿದ್ದ ಹರಿಜನ ಯುವಕನನ್ನು ಅಲ್ಲಿನ ಸವರ್ಣೀಯರು ನಡುಬೀದಿಯ ಚಾವಡಿಕಂಬಕ್ಕೆ ಕಟ್ಟಿ, ಹೊಡೆದು ಹೊಡೆದು ಕೊಂದು ಹಾಕಿ ಎಂಟು ವರ್ಷ ಕಳೆದರೂ ಈ ಊರಿನ ಜನರ ಮನಸ್ಸಿನಲ್ಲಿ ಆ ಹುಡುಗ ಇನ್ನೂ ಕಾಡುತ್ತಿದ್ದಾನೆ. ಏನಾದರೂ ದಲಿತರು ಹೋಟ್ಲು ದೇವಸ್ಥಾನಗಳಿಗೆ ಪ್ರವೇಶಿಸಿದರೆ " ಹಿಂದೆ ನಿಮ್ಮ ಹುಡುಗನಿಗಾದ ಗತಿ '' ಕಾಣಿಸುವ ಎಚ್ಚರಿಕೆಯ ಮಾತು ಆ ಊರಲ್ಲಿದೆ.

ಹೀಗೆ ಬಹು ಹಿಂದಿನಿಂದಲೂ ಅನುಭವಿಸಿಕೊಂಡು ಬಂದ ಕ್ರೂರ ಹಿಂಸೆ ಮತ್ತು ಸಂಕಟದಿಂದ ಮುಕ್ತರಾಗಿ ತಮ್ಮ ಬದುಕಿನಲ್ಲಿ ಹೊಸ ಬೆಳಕು ಕಾಣಲು ಇಂದು ನೂರಾರು ದಲಿತರು. ಸಂಘಟಿತರಾಗಿ ದಲಿತ ಸಂಘರ್ಷ ಸಮಿತಿಯೊಡನೆ ತಮ್ಮ ದನಿಗೂಡಿಸಿದರು.

ನೆಲಮಾಕನಹಳ್ಳಿಯ ಸಂಘರ್ಷ ಸಮಿತಿ ಶಾಖೆಯನ್ನು ಆರ್. ಎಸ್. ದೊಡ್ಡಣ್ಣ ಉದ್ಘಾಟಿಸಿದರು. ನಾರಾಯಣ್ ಅವರು ಅಧ್ಯಕ್ಷತೆ ವಹಿಸಿದ್ದ ಸಭೆಯಲ್ಲಿ ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ ಮತ್ತು ಮುಳ್ಳೂರು ನಾಗರಾಜ, ಹುಲ್ಲಕೆರೆ ಮಹದೇವ, ಲಕ್ಷ್ಮಣ ಹೊಸಕೋಟೆ ಇವರುಗಳು, ದಲಿತರು ಅನುಭವಿಸಿಕೊಂಡು ಬಂದಿರುವ ಕ್ರೂರ ಹಿಂಸೆಗಳನ್ನು ಪ್ರಸ್ತಾಪಿಸಿ ಸಂಘಟನೆ ಮತ್ತು ಹೋರಾಟಕ್ಕೆ ಕರೆ ನೀಡಿದರು. ಕೊನೆಯಲ್ಲಿ ನೆಲಮಾಕನ ಹಳ್ಳಿ ಕಾರ್ಯಕರ್ತರೇ ಪ್ರದರ್ಶಿಸಿದ "ಪತ್ರೆ ಸಂಗಪ್ಪನ ಕಗ್ಗೊಲೆ" ಎಂಬ ನಾಟಕ ನೂರಾರು ಜನರ ಹೃದಯವನ್ನು ನಾಟಿತು.

# ಸಾಲಪ್ಪನವರ ಮೇಲೆ ಹಲ್ಲೆ : ಷಂಡ ದಲಿತ ಪ್ರತಿನಿಧಿಗಳು

ಈಚೆಗೆ ಕಾಂಗ್ರೆಸ್ಸಿನ ಬಂಡುಗಾರರ ಸಾಲಿಗೆ ಸೇರಿದ ದಲಿತ ಶಾಸಕ ಐ.ಪಿ.ಡಿ. ಸಾಲಪ್ಪ ಅವರ ಮೇಲೆ ಕಾಂಗ್ರೆಸ್ ಗೂಂಡಾಗಳೇ ಹಲ್ಲೆ ಮಾಡಿದರು. ಸಾಲಪ್ಪನವರ ಶಕ್ತಿ, ಈ ಗೂಂಡಾಗಳಿಗೆ ಗೊತ್ತಿರಲಿಲ್ಲ. ಮಾರನೆದಿನ ರಾಜಧಾನಿಯ ಬೀದಿಗಳಲ್ಲಿ ಬಿದ್ದ ಕಸ ಅಲುಗಾಡಲಿಲ್ಲ.

ತಮ್ಮ ಮುಖಂಡನ ಮೇಲೆ ನಡೆದ ಹಲ್ಲೆಯಿಂದ ಕೆರಳಿದ ಪೌರ ಕಾರ್ಮಿಕರು ಗುಂಡೂ–ರಾವ್‌ಗಳ ದೌಲತ್ತನ್ನು ಒಂದೇ ದಿನದಲ್ಲಿ ಅಡಗಿಸಿದರು. ದಲಿತ ಶಕ್ತಿ, ಒಗ್ಗೂಡಿದರೆ ಆಗಬಹುದಾದ ಹೊಸ ಬದಲಾವಣೆಯ ಆಶಾಕಿರಣವಾಗಿತ್ತು, ಅವರ ಪ್ರತಿಭಟನೆ.

ನಾಚಿಕೆ ಪಡಬೇಕಾದ ಒಂದು ಅಂಶವೆಂದರೆ ದಲಿತ ಪ್ರತಿನಿಧಿಗಳೆನಿಸಿಕೊಂಡವರು ವಿಧಾನ ಸಭೆ–ಪರಿಷತ್ತುಗಳಲ್ಲಿ ಧಿಮಾಕು ಮಾಡುವ ಜನ ಈ ಬಗ್ಗೆ ಚಕಾರ ಎತ್ತದಿದ್ದುದು. ಇಡೀ ದಲಿತ ಜನಾಂಗ ಇಂಥವರ ಬಗ್ಗೆ ಎಚ್ಚರಿಕೆ ವಹಿಸಬೇಕಾದ್ದ ಅಗತ್ಯ. ○ ಇಸ್ಮಾಯಿಲ್

# ಅಶೋಕಪುರಂ ಗೋವಿಂದರಾಜುಗೆ ಹೆಣ್ಣಿಲ್ಲ!



ಮೈಸೂರು ಅಶೋಕಪುರಂನಲ್ಲಾಗುತ್ತಿದ್ದ ಗೀತಾ ಪ್ರವಚನವು ಪ್ರತಿಭಟನೆಗೆ ಸಿಕ್ಕಿ ಅರ್ಧಕ್ಕೇ ನಿಂತದ್ದು ಇನ್ನೂ ನೆನಪಿಂದ ಒಣಗಿಲ್ಲ. ಆಗ ಗೀತಾ ಪ್ರವಚನ ನಡೆಸಿದರೆ 'ತಪ್ಪೇನು ಎಂದು ಕೇಳಲಾಗುತ್ತಿತ್ತು. ಇಂದು ನಾವು ಜೀವಿಸುತ್ತಿರುವ ಕಾಲವು, 'ದೇವರೇ ಚಾತುರ್ವಣ್ಯ ಸೃಷ್ಟಿಸಿದ' ಎಂದೆನ್ನುವ ಗೀತೆಯೊಡನೆ ಹೊಡೆದಾಡಿ ರಕ್ತ ಸುರಿಸಿ 'ಚಾತುರ್ವಣ್ಯ ಜಾತಿಗಳು ಮಾನವ ಮಾಡಿಕೊಂಡದ್ದು' ಎಂಬ ನಂಬಿಕೆಯನ್ನು ಕಷ್ಟಪಟ್ಟು ಸಂಪಾದಿಸಿ ಕೊಂಡಿದೆ. ಆದುವರೆಗಿನ ಕಾಲದ ನಡಿಗೆಯಲ್ಲಿ 'ಜಾತಿ ದೇವರ ವರ' ಎಂದು ನಂಬಿದ ತುಳಿಯುವವರೂ ಚೆನ್ನಾಗಿ ತುಳಿದು ; 'ಜಾತಿ ದೇವರ ಕಟ್ಟಳೆ' ಎಂದು ನಂಬಿದ ತುಳಿಸಿಕೊಳ್ಳುವವರೂ ಚೆನ್ನಾಗಿ ತುಳಿಸಿಕೊಂಡು ಇದರಿಂದಾಗಿ ಚೆಲ್ಲಿದ ರಕ್ತವು ಹರಿದರೆ ನದಿಯಷ್ಟು, ನಿಂತರೆ ಸರೋವರದಷ್ಟು. ಇಷ್ಟೊಂದುಸಾಲದೆ?

ಆಗಲೇ ಸವರ್ಣೀಯ ಗೀತಾ ಪ್ರವಚನಕಾರರಿಗೆ ಅಶೋಕಪುರಂನ ಗೋವಿಂದರಾಜುರು 'ನಿಮ್ಮ ಹೆಣ್ಣುಗಳ ನಮಗೆ ಕೊಡ್ತಿರಾ?' ಎಂದು ಕೇಳಿದ್ದರು. ಪ್ರವಚಕರೇನು ಉತ್ತರಿಸಿದಂತೆ ಕಾಣಲಿಲ್ಲ. ಈ ಪರಿಸ್ಥಿತಿಯಲ್ಲಿ ನಾನು, ಅಸ್ಪೃಶ್ಯ ಗೋವಿಂದರಾಜುಗೆ ಸವರ್ಣೀಯ ಹೆಣ್ಣು ಸಿಗಬಹುದೇ ಎಂದು ಗೀತೆಯಲ್ಲೆಲ್ಲ ಹುಡುಕಾಡಿದೆ. ಗೀತೆ ಹೇಳುತ್ತದೆ :

ಕುಲಕ್ಷಯೇ ಪ್ರಣಶ್ಯಂತಿ
ಕುಲಧರ್ಮಾಃ ಸನಾತನಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಂ
ಅಧರ್ಮೋಭಿಭವತ್ಯುತ ॥

ಅಂದರೆ, 'ಕುಲವು ಕೆಟ್ಟರೆ ಸನಾತನ ಕುಲ ಧರ್ಮಗಳು ನಾಶವಾಗುತ್ತವೆ. ಧರ್ಮವು ಹಾಳಾದರೆ ಅಧರ್ಮವು ವ್ಯಾಪಿಸುತ್ತದೆ'—ಹೀಗೆ ಕುಲಕೆಟ್ಟು ಸನಾತನ ಧರ್ಮ ನಾಶವಾಗಿ ಅಧರ್ಮ ಹೆಚ್ಚಿದರೆ ಮಾತ್ರ ಶ್ರೀ ಗೋವಿಂದ ರಾಜುಗೆ ಛಾನ್ಸು ಇದೆ ಯಾಕೆಂದರೆ,

ಅಧರ್ಮಾಭಿ ಭವಾತ್ ಕೃಷ್ಣ
ಪ್ರದುಷ್ಯಂತಿ ಕುಲಸ್ತ್ರೀಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ
ಜಾಯತೇ ವರ್ಣ ಸಂಕರಃ ॥

ಅಂದರೆ, 'ಅಧರ್ಮವು ಪ್ರಬಲವಾದರೆ ಕುಲಸ್ತ್ರೀಯರು ಕೆಟ್ಟು ಹೋಗವರು. ಸ್ತ್ರೀಯರು ಕೆಟ್ಟರೆ ಜಾತಿ ಸಂಕರವು ಏರ್ಪಡುತ್ತದೆ'—ಈ ಪ್ರಕಾರವಾಗಿ ಮೇಲ್ಕಂಡ ಗೋವಿಂದರಾಜುಗೆ ಸವರ್ಣೀಯ ಹೆಣ್ಣು ಸಿಗಬೇಕಾದರೆ ಅಧರ್ಮವು ಪ್ರಬಲವಾಗಬೇಕು, ಕುಲಸ್ತ್ರೀಯರು ಕೆಡಬೇಕು, ಪರಿಣಾಮವಾಗಿ ಜಾತಿ ಸಂಕರವು ಏರ್ಪಡಬೇಕು. ಇಲ್ಲಿ ತಿಳಿದು ಬರುವ ನೀತಿ ಏನೆಂದರೆ ಸವರ್ಣೀಯರಿಗೆ ತಮ್ಮ ಹೆಂಗಳೆಯರ ಬಗ್ಗೆ ಇರುವ ಅಪನಂಬಿಕೆಯೇ ಗೋವಿಂದರಾಜುರಂಥವರಿಗೆ ಉಳಿದಿರುವ ಏಕೈಕ ನಂಬಿಕೆಯಾಗಿದೆ. ಆಯ್ತು, ಅದೆಲ್ಲ ಆಗಿಯೂ ಅಸ್ಪೃಶ್ಯ ಗೋವಿಂದರಾಜುಗೆ ಸವರ್ಣೀಯ ಹೆಣ್ಣು ಸಿಕ್ಕಿದರೂ ಅಲ್ಲಿಗೆ ಮುಗಿಯುವುದಿಲ್ಲ. ನಮ್ಮೆದುರು ನರಕವಿದೆ. ಗೀತೆಹೇಳುತ್ತದೆ :

ಸಂಕರೊ ನರಕಾಯೈವ
ಕುಲಘ್ನಾನಂ ಕುಲಸ್ಯ ಚ ।

ಅಂದರೆ, 'ವರ್ಣ ಸಂಕರವು ಏರ್ಪಟ್ಟರೆ ಕುಲಕ್ಕೆ ಮತ್ತು ಕುಲ ನಾಶಕರಿಗೆ ನರಕವುಂಟಾಗುವುದು' ಎಂದು! ಆದ್ದರಿಂದ ಪ್ರೀತಿಯ ಗೋವಿಂದರಾಜು, ಸವರ್ಣೀಯ ಅಮಾನವೀಯರು ಕಟ್ಟಿರುವ ನರಕವನ್ನು ನಾಶಮಾಡಿರಿ, ಗೀತೆ ಎಂಬ ಹೆಸರಿನ ಸವರ್ಣೀಯ ಹುಡುಗಿಯು ನಿಮ್ಮವಳಾಗಲಿ ●

## ದಲಿತರು ಉಂಡ ನೋವಿನ ಊಟ

ನಮ್ಮೂರು ಟಿ. ನರಸೀಪುರ ತಾಲ್ಲೂಕಿನ 'ತುಂಬಲ' ಎಂಬ ತುಂಬವೂ ಅವಿದ್ಯಾವಂತರೇ ಇರುವ ಹಳ್ಳಿ. ಕಳೆದ ಮೂರ್ನಾಲ್ಕು ವರ್ಷಗಳ ಹಿಂದೆ ನಮ್ಮ ಊರಿನ ಪಕ್ಕದ ಊರಾದ 'ನಿಂಗೇಗೌಡನ ಹುಂಡಿ' ಯಲ್ಲಿ 'ಮುತ್ತೇಗೌಡ' ತನ್ನ ಮಗ 'ಪಾಪಣ್ಣ'ನ ಮದುವೆ ನಡೆಸಿದ್ದ. ಮದುವೆಯಾದ ದಿನವೇ ರಾತ್ರಿ 9½ ನಂತರ ನಮ್ಮ ಹರಿಜನರಿಗೆ ಊಟ ಹಾಕುವುದು ನಮ್ಮ ಊರಿನ ಮತ್ತು ಪಕ್ಕದ ಊರಾದ ನಿಂಗೇಗೌಡನ ಹುಂಡಿಯ ಸವರ್ಣೀಯರ ಪದ್ಧತಿಯಾಗಿತ್ತು.

ಅದರಂತೆ ಅಂದು ರಾತ್ರಿ ನಮ್ಮ ಹರಿಜನರು ಮುತ್ತೆಗೌಡನ ಮನೆಯ ಸಮೀಪ ಊಟಕ್ಕಾಗಿ ಕಾದು ಕೂತರು. ಸ್ವಲ್ಪ ಸಮಯದ ನಂತರ ಮುತ್ತೇಗೌಡ, "ಲೇ ಬರ್ರ್ಲಾ, ಕೂತ್ಕರ್ಲಾ ಇಲ್ಲಿ" ಎಂದು ಚಪ್ಪರದಡಿಯಲ್ಲಿ ಕೂಡ್ರಿಸಿ, ಇಸ್ತ್ರಿ ಕೊಡಿಸಿದ. ಮತ್ತೆ "ಎಲ್ಲರ್ಗೂ ಇಸ್ತ್ರಿ ಕೊಟ್ಟಾಯ್ತರ್ಲಾ?" ಎಂದ. ಅದಕ್ಕೆ ಉತ್ತರವಾಗಿ ನಮ್ಮಲ್ಲೊಬ್ಬ "ಆಯ್ತು ಕಣ್ ತರ್ಸಪ್ಪಾ" ಎಂದ. ತಕ್ಷಣ ಗೌಡ, "ನಿಮ್ಮನ್ ದಿರ್ ತುಲ್ಕಾಕ್ಯಾದಿ ಕಣೋಗ್ರಿ, ಬಂದ್ ಕೂತ್ಕಬುಟ್ರಿ, ಇವರ ತಾತನ ಮನೇದು ಅಂತ" ಎಂದು ಗದರಿದ. ನಿರಾಶೆ, ಅಪಮಾನಗಳಿಂದ ದಲಿತರು ಹಿಂದಿರುಗಿದರು.

ಎಸ್. ಮರಿಸ್ವಾಮಿ, ತುಂಬಲ

## ಲಿಂಗ

ಎನ್ನ ಕೈಯಲ್ಲಿ ಕೊಟ್ಟುದ
ದೇವರೆಂದಿದ್ದೆ
ಇದು ಮೆಲ್ಲಮೆಲ್ಲನೆ ಕಲ್ಲಾಗಿ
ಬರುತ್ತಿದೆ. ಇದ ನಾನೊಲ್ಲೆ
ಬಲ್ಲವರು ಹೇಳಿ: ಉಂಬಡೆ ಬಾಯಿಲ್ಲ.
ನೋಡುವಡೆ ಕಣ್ಣಿಲ್ಲ
ಎನ್ನ ಬಡತನಕ್ಕೆ ಬೇಡುವಡೆ
ಏನೂ ಇಲ್ಲ

● ನಗೆಯ ಮಾರಿತಂದೆ

[ಕಳೆದ ಜುಲೈ ಸಂಚಿಕೆಯಿಂದ ಇಂಥ ಅಪರೂಪದ ಐತಿಹಾಸಿಕ ವಚನಗಳನ್ನು ಪ್ರಕಟಿಸುತ್ತಿದ್ದೇವೆ. ಇಂಥವು ಸಿಕ್ಕರೆ ದಯವಿಟ್ಟು ಕಳಿಸಿಕೊಡಿ, ಸಂ]

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ ವಿನ್ಯಾಸ ಪ್ರಿಂಟರ್ಸ್, ಮೈಸೂರು-9 ಇಲ್ಲಿ ಮುದ್ರಿಸಲ್ಪಟ್ಟು ಎಚ್ ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು ವಿಳಾಸ : ಮಾಸ್ತಿಗುಡಿ, 2ನೇ ಕ್ರಾಸ್, ಅಶೋಕಪುರಂ, ಮೈಸೂರು-570009